

# ಶ್ರೀವಾಣಿ

ಮನಸ್ಸೇ ಮಾತು ಮತ್ತು ಕೃತಿಗಳಿಗೆ ಮೂಲ ಪ್ರೇರಣೆ. ಮನಸ್ಸು ಪರಿಶುದ್ಧವಾಗಿದ್ದರೆ ಮಾತೂ ಶುದ್ಧವಾಗಿರುತ್ತದೆ. ಕೃತಿಯೂ ಶುದ್ಧವಾಗಿರುತ್ತದೆ. ಮನಸ್ಸು ಕೊಳಕಾಗಿದ್ದರೆ ಮಾತೂ ಕೊಳಕಾಗಿರುತ್ತದೆ. ಕೃತಿಯೂ ಕೊಳಕಾಗಿರುತ್ತದೆ.

ಒಮ್ಮೆ ಒಬ್ಬ ಮಹಾರಾಜ ಕುದುರೆಯೇರಿ ರಾಜ್ಯವನ್ನು ಸುತ್ತಾಡುವುದಕ್ಕಾಗಿ ಹೊರಟ. ಮಧ್ಯಾಹ್ನವಾಯಿತು. ವಿಪರೀತ ಬಿಸಿಲು. ದಾರಿಮಧ್ಯೆ ಒಂದು ತಂಪಾದ ತೋಟಸಿಕ್ಕಿತು. ವಿಶ್ರಮಿಸಲು ಅಲ್ಲಿಳಿದ. ಆ ತೋಟದ ಮಾಲೀಕನೂ ಅಲ್ಲಿಯೇ ಇದ್ದ. ಪ್ರಭುಗಳನ್ನು ಕಂಡ. ಕೂಡಲೇ ಭಕ್ತಿಯಿಂದ ತೋಟದೊಳಗೆ ಕರೆದೊಯ್ದ. ಪಕ್ವವಾಗಿ ಹಣ್ಣಾಗಿರುವ ಒಂದು ದಾಳಿಂಬೆ ಹಣ್ಣನ್ನು ಕಿತ್ತುತಂದ. ಒಂದು ಲೋಟತೆಗೆದುಕೊಂಡ. ರಸವನ್ನು ಹಿಂಡಿದ. ಲೋಟತುಂಬಿತು. ಕುಡಿಯಲು ರಾಜನಿಗೆ ಕೊಟ್ಟ. ಮಹಾರಾಜ ಪಾನಮಾಡಿದ. ಬಹಳ ಸ್ವಾದುವಾಗಿತ್ತು. ಅವನ ಹಸಿವು ಬಾಯಾರಿಕೆಗಳೆಲ್ಲಾ ಪರಿಹಾರವಾದವು. ಆದರೆ ಮನಸ್ಸು ಕೊಂಚವಿಕಾರವಾಯಿತು. ಮನಸ್ಸಿನಲ್ಲಿ ಕೆಟ್ಟ ಆಲೋಚನೆ ಬಂತು. ಆ ಮೇಲೆ ಮಧುರವಾದ ರಸವನ್ನು ಇನ್ನೂ ಒಂದು ಲೋಟ ಕುಡಿಯಬೇಕೆಂದು ಆಸೆ ಆಯ್ತು. ಕೇಳಿದ, ಸಂತೋಷದಿಂದ ಮಾಲೀಕ ತಂದುಕೊಟ್ಟ. ರಾಜ ಕುಡಿದ ಅದರೆ ಮೊದಲು ಕುಡಿದಷ್ಟು ಮಧುರವಾಗಿರಲಿಲ್ಲ. ಕಹಿಯಾಗಿತ್ತು. ರಾಜ ಪ್ರಶ್ನೆಮಾಡಿದ-ಏನಯ್ಯ! ಈ ಹಣ್ಣು ಅದೇ ಮರದ್ದೊ? ಬೇರೆ ಮರದ್ದೊ? ರೈತ ಉತ್ತರ ಕೊಟ್ಟ–ಸ್ವಾಮಿ ಅದೇಮರದ್ದು; ಅದೇ ಕೊಂಬೆಯದು. ರಾಜನಿಗೆ ಆಶ್ಚರ್ಯವಾಯ್ತು. ಅದು ಸಮಸ್ಯೆಯೂ ಆಯಿತು. ಊರಿಗೆ ತೆರಳಿದ. ಮರುದಿವಸ ಎಲ್ಲವಿದ್ವಾಂಸರನ್ನು ಕರೆಸಿದ. ತನ್ನ ಸಮಸ್ಯೆಯನ್ನು ಅವರ ಮುಂದಿಟ್ಟ–ಒಂದೇಮರದ ಹಣ್ಣಿನರಸ ಮೊದಲು ಕುಡಿದಾಗ ಮಧುರವಾಗಿರಲು, ಇನ್ನೊಂದು ಬಾರಿ ಕುಡಿದಾಗ ಕಹಿಯಾಗಲು ಕಾರಣವೇನು? ವಿದ್ವಾಂಸರೆಲ್ಲರೂ ಆಲೋಚನಾಮಗ್ನರಾದರು. ಅದರಲ್ಲಿ ಬುದ್ಧಿವಂತನಾದ ವಿದ್ವಾಂಸನೊಬ್ಬನು ಕೇಳಿದ–ಸ್ವಾಮಿ, ಎರಡನೇಬಾರಿ ನೀವು ಕುಡಿಯುವಾಗ ಮನಸ್ಸಿನಲ್ಲಿ ಏನಾದರೂ ಆಲೋಚನೆಮಾಡಿದಿರಾ? ರಾಜ ಹೇಳಿದ–ಹೌದು, 'ತೋಟ ಬಹಳ ಫಲವತ್ತಾಗಿದೆ. ಮಾಲೀಕನಿಗೆ ಅದರಿಂದ ವರಮಾನ ಜಾಸ್ತಿ ಬರುತ್ತದೆ, ಆದ್ದರಿಂದ ಕಂದಾಯ ಹೆಚ್ಚು ಮಾಡಬೇಕು. ಎಂದು ಮನಸ್ಸಿನಲ್ಲಿ ಅಂದುಕೊಂಡೆ. ಆಗ ಪಂಡಿತ ಹೇಳಿದ. ಹಾಗಾದರೆ ಸ್ವಾಮಿ, ನಿಮ್ಮ ಸಮಸ್ಯೆಗೆ ಇಲ್ಲೇ ಇದೆ ಪರಿಹಾರ. ನೀವು ಮನಸ್ಸಿನಲ್ಲಿ ಕೆಟ್ಟದ್ದನ್ನು ಆಲೋಚನೆ ಮಾಡಿದಿರಿ. ಆದರಿಂದ ನಿಮ್ಮ ಮನಸ್ಸು ಕೊಳಕಾಯಿತು. ಅದ್ದರಿಂದಲೇನೆ ಎರಡನೇ ಬಾರಿ ಕುಡಿದ ರಸ ಕಹಿಯಾಯಿತು.

# 'ಸಿದ್ಧಗಂಗಾ'

**ಅಕ್ಟೋಬರ್ ೧೯೮೦**

**ಸಂಪುಟ-೧೭ ಸಂಚಿಕೆ-೧೦**

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕ ಮಂಡಲಿ
ಪ್ರೊ|| ಚನ್ನಪ್ಪ ಎರೇಸೀಮೆ
ಪಿ. ಎಸ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ಆಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10-00** ರೂ


## ಈ ಸಂಚಿಕೆಯಲ್ಲಿ


* ಶ್ರೀವಾಣಿ 3
* ಸಂಪಾದಕೀಯ 5
* ಶ್ರೀ ಶ್ರೀಗಳವರ ಆಶೀರ್ವಚನ 6
* ನವನೀತ ಅಮೃತ ಬಿಂದು 7
* ಒಲಿದು ಬಂದ ಗೌರವ 8
* ಮರ್ತ್ಯಲೋಕದ ಮಹಾಬೆಳಗು : ಉದ್ದಾನಯತೀಶ 9
* ಜನಪದ ಗೀತೆಗಳಲ್ಲಿ ಮಕ್ಕಳು 13
* ಪುರಂದರದಾಸರು 17
* ಶೂನ್ಯ ಸಂಪಾದನೆ ಸುಲಭವಾಗಿ ಮೋಸಗೊಳಿಸುವ ಕೃತಿಯೇ ? ಒಂದು ವಿವೇಚನೆ 19
* ಕಾವ್ಯ ವಾಹಿನಿ 21
* ಗೆನಿಯ (ಕಥೆ) 22
* ಜನಗಣತಿ 25
* ಸಿದ್ಧಗಂಗೆಯಲ್ಲಿ ಬನ್ನಿಹಬ್ಬ 27


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೆಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ-572104 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572104 ತುಮಕೂರು ಜಿಲ್ಲೆ.

# ಸಂಪಾದಕೀಯ

ಕಲ್ಕತ್ತೆಯ ಭಾರತೀಯ ಭಾಷಾ ಸಂಸ್ಥೆಯವರು ಶ್ರೀ ಡಾ॥ ಸಿದ್ಧಯ್ಯ ಪುರಾಣಿಕರವರ ''ವಚನೋದ್ಯಾನ'' ಕ್ಕೆ ತನ್ನ ಜೊಚ್ಚಲ ಪ್ರಶಸ್ತಿ ನೀಡಿ ಗೌರವಿಸಿದುದು ಕನ್ನಡ ನಾಡಿಗೊಂದು ಹೆಮ್ಮೆಯ ಸಂಗತಿ. ಶ್ರೀ ಪುರಾಣಿಕರವರ ವಚನೋದ್ಯಾನ ಕನ್ನಡ ಸಾರಸ್ವತ ಪ್ರಪಂಚಕ್ಕೂ ಹಾಗೂ ವಚನ ವಾಙ್ಮಯಕ್ಕೂ ಸಲ್ಲಿಸಿದ ಶ್ರೀಮಂತ ಕಾಣಿಕೆ. ಅವರ ಸುಮಾರು ಐವತ್ತು ವರ್ಷಗಳ ಅನುಭವ ಹಾಗೂ ಹತ್ತು ವರ್ಷಗಳ ಪರಿಶ್ರಮದ ಫಲವೇ ಈ ವಚನೋದ್ಯಾನ. ಉಸ್ಮಾನಿಯಾ ವಿಶ್ವವಿದ್ಯಾಲಯದ ಉರ್ದು ಮಾಧ್ಯಮದಲ್ಲಿ ಪದವಿ ಪಡೆದ ಶ್ರೀ ಪುರಾಣಿಕರು ಕನ್ನಡದ ಉದ್ದಾಮ ಕವಿ, ಸಾಹಿತಿ, ಮತ್ತು ದಾರ್ಶನಿಕರಲ್ಲೊಬ್ಬರಾಗಿ ಗೌರವಕ್ಕೆ ಪಾತ್ರವಾದುದು ಅವರ ತಾಯ್ನಾಡು ನುಡಿಯ ಉಜ್ವಲ ಪ್ರೇಮಕ್ಕೆ ಹಿರಿಯ ಸಾಕ್ಷಿಯಾಗಿದೆ. ''ವರ್ಷ ಹದಿನಾರರ ಆರಂಭದಲ್ಲಿ ಅಂಕುರಗೊಂಡ ಕವಿತಾಲತಾಲಹರಿ, ಈ ಅರವತ್ತರ ಹರೆಯದಲ್ಲಿ ವಚನ ಉದ್ಯಾನವಾಗಿ ಸಾಹಿತಿಗಳ ಕವಿದಾರ್ಶನಿಕರ ಕೈಸೇರಿ ಗೌರವಿಸಲ್ಪಟ್ಟಿದ್ದರೆ ಅದು ನನಗಲ್ಲ, ತಮ್ಮ ತಂದೆತಾತಂದಿರ ಕಪಿತಾಪರಂಪರೆ ನಾಡಿನ ಹಿರಿಯ ಕವಿಪುಂಗವರ ಸೂಕ್ತ ಮಾರ್ಗದರ್ಶನ, ಹಲವು ಧರ್ಮಪ್ರವಾದಿಗಳ ಅನುಭವ ಸೂಕ್ತಿಗಳು, ಅನೇಕ ಸಾಧುಸಂತರ ಆಶೀರ್ವಾದ, ಇಂದಿನ ಜನಜೀವನದ ನೇರ ಅನುಭವವೇ ಮುಖ್ಯ ಕಾರಣ. ಇವುಗಳಿಗೆ ನೇರ ಗೌರವ ಸಲ್ಲಬೇಕಾಗುತ್ತದೆ. ಎಂಬ ಅವರ ಮಾತಿನ ಅಭಿಪ್ರಾಯವನ್ನು ಕೃತಿಯೊಡನೆ ತೂಗಿ ನೋಡಿದರೆ ನೂರಕ್ಕೆ ನೂರು ಸತ್ಯವಾಗಿದೆ. ಈ ಉದ್ಯಾನದಲ್ಲಿ ಹಿರಿಯರ ಅನುಭವ, ಮಾರ್ಗದರ್ಶನಗಳು ಬಾಳಿಗೆ ಬೆಳಕಾಗಿವೆ. ಧರ್ಮಪ್ರವಾದಿಗಳ ನುಡಿಮುತ್ತುಗಳು ಜನ್ಮ ಸಾರ್ಥಕ್ಯಕ್ಕೆ ಸಹಕಾರಿಯಾಗಿವೆ. ಸಾಧುಸಂತರ ಆಶೀರ್ವಾದ ಸೂಕ್ತಿಗಳು ಬದುಕಿಗೆ ಸಂಜೀವಿನಿಯಾಗಿವೆ. ಜನಜೀವನದ ನೋವುನಲಿವು ಅತೃಪ್ತಿ ಅಸಮಾಧಾನ ಮಾನವೀಯತೆಯನ್ನು ಎಚ್ಚರಗೊಳಿಸುತ್ತದೆ. ಇವೆಲ್ಲವೂ ಜೀವನವನ್ನು ಪ್ರತಿಬಿಂಬಿಸಿ ಜೀವನದರ್ಶನವಾಗಿ ಮೈದುಂಬಿಕೊಂಡಿದೆ ಈ ವಚನೋದ್ಯಾನದಲ್ಲಿ. ಒಟ್ಟಿನಲ್ಲಿ ಸದ್ದುಗದ್ದಲವಿಲ್ಲದ ಸಾಧನೆಯ ಸಿದ್ಧಿ ಈ ಉದ್ಯಾನ ಎಂದರೆ ಅತಿಶಯೋಕ್ತಿಯಾಗಲಾರದು. ಭಾರತೀಯ ಭಾಷಾ ಸಂಸ್ಥೆ ಹಾಗೂ ಶ್ರೀ ಪುರಾಣಿಕ್‌ರವರು ಅಭಿನಂದ್ಯರು.

---

ಶ್ರೀಮಾನ್ ಸಿ., ವಿಶ್ವನಾಥಪ್ಪ, ಮಂಡಿಮರ್ಚೆಂಟ್, ನ್ಯೂ ತರಗುಪೇಟೆ, ಬೆಂಗಳೂರು ಇವರು ದಿನಾಂಕ 7-10-80ರಂದು ದೈವಾಧೀನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಶ್ರೀಯುತರು ಧರ್ಮಾಭಿಮಾನಿಗಳು, ಧರ್ಮ ಸಂಸ್ಥೆಗಳಿಗೆ ಉದಾರ ಧನ ಸಹಾಯ ಮಾಡಿದ ಪುಣ್ಯಾತ್ಮರು. ಅಂತೆಯೇ ಗಣ್ಯವರ್ತಕರು ದೈಹಿಕ ಅಸ್ವಸ್ಥತೆಯಿಂದ ವಿಧಿವಶರಾದರು. ಈ ಪುಣ್ಯಾತ್ಮರು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಮತ್ತು ಅಲ್ಲಿ ನಡೆಯುವ ದಾಸೋಹ ಕಾರ್ಯಕ್ಕಾಗಿ ದಾನ ಧರ್ಮ ಮಾಡಿ ಕೃತಕೃತ್ಯರಾದವರು. ಶ್ರೀಯುತರ ಅಂತ್ಯಸಂಸ್ಕಾರವು ಶ್ರೀ ಕ್ಷೇತ್ರದಲ್ಲಿಯೇ ನಡೆಯಿತು. ಅವರ ಆತ್ಮಕ್ಕೆ ಶಾಂತಿಕೋರಿ 'ಸಿದ್ಧಗಂಗಾ'ವು ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

---

**ಓದುಗಬಳಗಕ್ಕೊಂದು ಸವಿ ಸಂದೇಶ.**

ನಿಮ್ಮ ಕೈ ಸೇರಲಿದೆ ! 'ಸಿದ್ಧಗಂಗಾ'. ಹೇಗೆ ? ಹೊಸ ಆಕಾರ ( 1/8 ಡೆಮ್ಮಿ ) ಆಕರ್ಷಕ ವಿಷಯ, ಸುಂದರ ಮುಖ ಪುಟಗಳೊಡನೆ. ಯಾವಾಗ ? ಜನವರಿ 1981 ರಿಂದ.

# "ಶ್ರೀ ಶ್ರೀ ಗಳವರ ಆಶೀರ್ವಚನ"

—ಸಂ॥ ಪಿ. ಎಸ್. ಪಿ.

(ದಿನಾಂಕ 18.10-80ರ ಶನಿವಾರ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಜರುಗಿದ ಶ್ರೀ ಸಿದ್ಧಯ್ಯ ಪುರಾಣಿಕರ ಸನ್ಮಾನ ಸಮಾರಂಭದ ಅಧ್ಯಕ್ಷ ಭಾಷಣದಿಂದ)

ಅಭಿಮಾನಿಗಳೇ ತಾಯಿಂದಿರೇ,

ಶ್ರೀ ಸಿದ್ಧಯ್ಯ ಪುರಾಣಿಕರಿಗೆ ಸನ್ಮಾನಿಸಿ, ಗೌರವ ಸೂಚಿಸುತ್ತಿರುವುದು ಅತ್ಯಂತ ಸಂತೋಷದಾಯಕ ವಿಚಾರ. ಇದುವರೆವಿಗೂ ಅವರ ಎಲ್ಲ ಅಭಿಮಾನಿಗಳೂ ಮಾನ್ಯ ಸಚಿವರುಗಳೂ ಪುರಾಣಿಕರ ಬಗ್ಗೆ ಅವರ ಪಾಂಡಿತ್ಯ, ಆಡಳಿತ ದಕ್ಷತೆ ಬಗ್ಗೆ ಹಲವು ಪ್ರಶಂಸಾತ್ಮಕ ಮಾತುಗಳನ್ನಾಡಿದ್ದಾರೆ. ಶ್ರೀ ಪುರಾಣಿಕರು ಆ ಪ್ರಶಂಸೆಗೆ ನಿಜಕ್ಕೂ ಅರ್ಹರಾದವರು. ಕಾರಣ ಅವರು ಒಂದು ಒಳ್ಳೆಯ ಪರಂಪರೆಯನ್ನು ಬೆಳೆಸಿ ಉಳಿಸಿಕೊಂಡು ಬಂದಿದ್ದಾರೆ. ಯಾವ ಪರಂಪರೆಯೆಂದರೆ ತಮ್ಮ ತಂದೆ ತಾತಂದಿರಿಂದ ಕನ್ನಡ ನುಡಿಗೆ ಸಲ್ಲಿಸುತ್ತಾ ಬಂದ ಸೇವೆಗೆ ವಿಚ್ಛಿತ್ತಿ ಬರದಂತೆ ತಾವೂ ಅದಕ್ಕೆ ಕಾಣಿಕೆ ಸಲ್ಲಿಸಿದ್ದಾರೆ, ಒಳ್ಳೆಯ ಸಾಹಿತಿಗಳಾಗಿದ್ದಾರೆ. ಮತ್ತೊಂದು ವಿಷಯವೆಂದರೆ ಅವರು ಬರೀ ಸಾಹಿತಿಗಳಲ್ಲ, ಬರೀ ಅಭ್ಯಾಸ ಶೀಲರಲ್ಲ, ಅಧಿಕಾರಿ ಮಾತ್ರವಲ್ಲ ದಾರ್ಶನಿಕರೂ ಹೌದು. ಅವರು ದರ್ಶನ ಭಾವನೆಯನ್ನು ಅಭ್ಯಾಸ ಮಾಡಿ ಉಳಿಸಿಕೊಂಡು ಬಂದವರು. ತಮ್ಮ ಉದ್ಯೋಗಕ್ಕೆ ಯಾವ ಚ್ಯುತಿಯೂ ಬರದಂತೆ ಸೇವೆ ಸಲ್ಲಿಸಿ ಅವಕಾಶ ಲಭ್ಯವಾದಾಗ ದರ್ಶನ ಭಾಗಗಳನ್ನು ಆಳವಾಗಿ ಅಭ್ಯಾಸ ಮಾಡಿದವರು. ಹಿರಿಯ ವಿದ್ವಾಂಸರ ಸಲಹೆ ಸಹಕಾರಗಳನ್ನು ಪಡೆದು ಹಿರಿಯ ವಿದ್ವಾಂಸರಾದರು. ಮತ್ತು ಹಿರಿಯ ಅಧಿಕಾರಿಗಳಾಗಿ ತಮ್ಮ ಕೈ ಕೆಳಗಿನವರ ಸುಖ ದುಃಖಗಳನ್ನು ಅರಿತು ಅರ್ಥ ಮಾಡಿಕೊಂಡಿದ್ದವರು. ಅವರ ಕಷ್ಟ ಕಾರ್ಪಣ್ಯಗಳ ನೇರ ಅನುಭವ ಈ ಕೃತಿಗೆ ಕಾರಣವಾಯಿತು. ಅವರ ಬಗೆಗೆ ಅನುಕಂಪ ಮೂಡಿ ಬಂದಿತು. ಇಲ್ಲಿ ಅವರ ಹೃದಯವಂತಿಕೆ ನಿಜಕ್ಕೂ ಉದಾತ್ತವಾದುದು. ಮಹಾ ಭಾರತದಲ್ಲಿ ಒಂದು ಮಾತು ಬರುತ್ತದೆ. ಜಗತ್ತಿನಲ್ಲಿ ಶ್ರೇಷ್ಠವಾದ ವ್ಯಕ್ತಿ ಯಾರು ? ಎಂದು. ಇದಕ್ಕೆ ಉತ್ತರವಿಷ್ಟು: ಪರಮಾತ್ಮನು ಶ್ರೇಷ್ಠವಾದ ಈ ಮಾನವ ಜನಾಂಗವನ್ನು ಸೃಷ್ಟಿ ಮಾಡಿದ್ದಾನೆ, ಈ ಮಾನವ ಜಗತ್ತಿನ ಎಲ್ಲ ಪ್ರಾಣಿ ವರ್ಗಕ್ಕೂ ಮಿಗಿಲಾದವನು. ಈ ಅಭಿಪ್ರಾಯವನ್ನು ಯಾವ ವ್ಯಕ್ತಿ ಅರ್ಥ ಮಾಡಿಕೊಂಡು ಅದನ್ನು ತನ್ನ ಜೀವನದಲ್ಲಿ ಅಳವಡಿಸಿ ವಿಕಾಸ ಮಾಡಿಕೊಂಡು ಮೊದಲು ತನ್ನ ಜೀವನದಲ್ಲಿ ಅಳವಡಿಸಿ ವಿಕಾಸ ಮಾಡಿಕೊಂಡು ಮೊದಲು ತನ್ನ ಉದ್ಧಾರ ಮಾಡಿ ಎಲ್ಲರಿಗೂ ಎಲ್ಲಕ್ಕೂ ಮಂಗಳಕರವಾದ ವಾತಾವರಣವನ್ನು ನಿರ್ಮಾಣ ಮಾಡುವ ವ್ಯಕ್ತಿ ನಿಜಕ್ಕೂ ಶ್ರೇಷ್ಠವಾದ ವ್ಯಕ್ತಿ, ಪರಮಾತ್ಮನು ಕೊಟ್ಟಿರುವ ಅನುಕೂಲಗಳನ್ನು ಉಪಯೋಗಿಸಿಕೊಳ್ಳದೆ ದುರುಪಯೋಗ ಪಡಿಸಿಕೊಂಡು ನಿಕೃಷ್ಟನಾಗಿ ಜೀವನ ಸಾಗಿಸಿ ತನ್ನ ಪರಿಸರ ಇತ್ಯಾದಿಗಳನ್ನು ಅಳುಗೆಡೆಹಿದವನು ಸಾರ್ಥಕ ಮಾಡಿಕೊಳ್ಳದವನು ಅತ್ಯಂತ ಕೀಳು ಎಂಬುದಾಗಿ; ಆದ್ದರಿಂದ ಇಂದಿನ ಅನುಭವದಿಂದ ಪರಿಪಕ್ವಗೊಂಡ ಸಾಹಿತ್ಯ ರಚನೆ ಮುಂದಿನ ಪೀಳಿಗೆಗೆ ಮಾರ್ಗದರ್ಶನವಾಗುತ್ತದೆ. ಹಲವು ಮಂದಿ ಅಧಿಕಾರಿಗಳಾಗಿದ್ದೀರಿ. ಅವರಿಗೆ ಒಂದು ಮಾತು. ನೀವುಗಳು ಉತ್ತಮ ಅಧಿಕಾರಿಗಳಾಗಿ ಸೇವೆ ಸಲ್ಲಿಸಿ, ಸಮಾಜಕ್ಕೆ ಸಾಕಷ್ಟು ಸೇವೆ ಮಾಡಿ ನಿವೃತ್ತರಾದ ಮೇಲೂ ಅಧ್ಯಯನಕ್ಕೆ ತೊಡಗಿ ಕೃತಿ ರಚನೆ ಮಾಡಿದರೆ ಶ್ರೀ ಸಾಮಾನ್ಯನಿಗೆ ಅದು ಮಾರ್ಗದರ್ಶನವಾಗುತ್ತದೆ. ಅದು ಹಲವು ದಿನಗಳ ಅನುಭವದ ಪರಿಪಕ್ವ ಸಾಹಿತ್ಯವಾಗುತ್ತದೆ. ಹಾಗೆಯೇ ಅಧಿಕಾರದಲ್ಲಿದ್ದು ಮತ್ತು ನಿವೃತ್ತಿ ಹೊಂದಿದ ಮೇಲೂ ಸೇವೆ ಸಲ್ಲಿಸಿದವರಲ್ಲಿ ಶ್ರೀ ಪುರಾಣಿಕರು ಮತ್ತು ನಾಗೇಗೌಡರು ಮುಖ್ಯರಾದವರು. ಆದ್ದರಿಂದ ಈ ಸಮಾರಂಭವು ಆ ತರಹದ ಅಧ್ಯಯನ ಸಾಹಿತ್ಯ ರಚನೆಗೆ ಮಾರ್ಗದರ್ಶನ ನೀಡಿದರೆ, ಸಾಮಾಜಿಕ ದೋಷಗಳು, ಮಾಲಿನ್ಯಗಳು ತಿಳಿಯಾಗಿ ಸಮೃದ್ಧ

(8 ನೇ ಪುಟ ನೋಡಿ)

# ನವನೀತ

ವಂತಬಹವೋ ಮೂರ್ಖಾಃ ಕ್ವಚಿದೇಕೋ ವಿಶುದ್ಧಧೀಃ ।
ಪ್ರಿಕಿತೋಽಸದಾ ಮೂರ್ಖೈರ್ಜಲೋ ಯಸ್ಯ ಬುದ್ಧಿರ್ನ ॥

ಮೂರ್ಖರು ಬಹಳ ಮಂದಿ ಇರುತ್ತಾರೆ. ಒಳ್ಳೆಯ ಬುದ್ಧಿವಂತರು ಅಪರೂಪ. ಮೂರ್ಖರಿಂದ ಹೆದರಿಸಲ್ಪಟ್ಟರೂ ಸಹ ಯಾವ ವ್ಯಕ್ತಿಯು ಸ್ಥಿರವಾಗಿರುವನೋ ಅವನೇ ಬುದ್ಧಿವಂತ.

—ವೇದಾಂತಾಚಾರ್ಯ

  

ದತ್ತಾನಾಮು ಪಾದಾನಂ ಹಿಂಸಾ ಚೈವಾ ವಿಧಾನತಃ ।
ರದಾರೋಪ ಸೇವಾ ಚ ಶಾರೀರಂ ತ್ರಿವಿಧಂ ಸ್ಮೃತಮ್ ॥

ನ್ಯಾಯವಾಗಿ ಪರದ್ರವ್ಯವನ್ನು ತೆಗೆದುಕೊಳ್ಳುವುದು, ವಿಧಿ ವಿರುದ್ಧವಾದ ಹಿಂಸೆ, ಪರಸ್ತ್ರೀಯರಲ್ಲಿ ಆಸಕ್ತಿ ಈ ಮೂರು ಶರೀರದಿಂದಾಗುವ ಪಾತಕಗಳು.

—ಮನುಸ್ಮೃತಿ

  

ರ್ಗುಣಃ ಶೋಭತೇ ನೈವ ವಿಪುಲಾಡಂಬರೋಽಪಿ ನಾ !
ಸಾರತಮ್ಯ ಪುಷ್ಪಶ್ರೀ ಶೋಭಿತಃ ಶಾಲ್ಮಲಿರ್ಯಥಾ ॥

ಣವಂತನಲ್ಲದವನು ಆಡಂಬರದ ವೇಷವನ್ನು ಧರಿಸಿ ಕೊಂಡಿದ್ದರೂ ಎಂದಿಗೂ ಶೋಭಿಸುವುದಿಲ್ಲ. ಅವು ನೋಡುವುದಕ್ಕೆ ಮಾತ್ರ ಸುಂದರವಾದ ಹೂಗಳ ಕಾಂತಿಯಿಂದ ಕೂಡಿದ ಬೂರುಗದ ಮರವಿದ್ದಂತೆ ನಿಷ್ಫಲ

—ರಸಗಂಗಾಧರ

## ಅಮೃತ ಬಿಂದು

ಮನಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷ ಯೋಃ । ”

ಮನಸ್ಸೆ ಎಲ್ಲಕ್ಕೂ ಮುಖ್ಯ ಕಾರಣ. ಇದರ ವರ್ತನೆ ಬಲು ವಿಚಿತ್ರ. ಒಲಿದರೆ ಮಹಾದೇವನನ್ನಾಗಿಸುತ್ತದೆ. ಒಲಿಯದಿದ್ದರೆ ಮಹಾಮಾಯೆಯಾಗಿ ಕಾಡುತ್ತದೆ. ಅದನ್ನು ಒಲಿಸಿಕೊಳ್ಳುವುದು ಬಹಳ ಕಷ್ಟ. ವಾಸ್ತವಿಕವಾಗಿ ವಿಚಾರ ಮಾಡಿದರೆ ಮನಸ್ಸು ಮಾಯೆಯಲ್ಲ. ನಮ್ಮ ಮನದ ಮುಂದಣ ಆಸೆಯೇ ಮಾಯಾಪಾಶ. ಆಶೆಯ ಪಾಶದಲ್ಲಿ ಬಿದ್ದ ಮನುಷ್ಯನ ಮನಸ್ಸು ಚಿತ್ರವಿಚಿತ್ರವಾಗಿ ಪರಿಣಮಿಸುತ್ತದೆ. ಮನಸ್ಸು ಮರ್ಕಟನಂತಾಗಿ ಹಲವು ರೆಂಬೆ ಕೊಂಬೆಗಳಿಗೆ ಜಿಗಿಯುತ್ತದೆ. ಅದರ ಚಪಲ ಜೇಷ್ಟೆಗಳೇ ಅಧಿಕ “ ತನುವೆಂಬ ವೃಕ್ಷವನೇರಿ ಇಂದ್ರಿಯುಗಳೆಂಬ ಶಾಖೆ ಶಾಖೆಗೆ ಜಗಿದು” ಜೀವನವನ್ನೇ ಅಲ್ಲೋಲ ಕಲ್ಲೋಲ ಮಾಡುತ್ತದೆ. ಆಶೆಯ ಪೊರೆ ಬೆಳೆದ ಕಣ್ಣಿಗೆ ಕರುಣೆಯಿಲ್ಲ. ದಯೆ ದಾಕ್ಷಿಣ್ಯಗಳಿಲ್ಲ. ಅವಿವೇಕಿಗಳ ಅತಿರೇಖವೇ ಅಧಿಕವಾಗುತ್ತದೆ. ಹೊನ್ನು, ಹೆಣ್ಣು, ಮಣ್ಣುಗಳಿಗಾಗಿ ಮನಬಯಸಿ ಶರೀರದಲ್ಲಿ ಕಾಮಕ್ರೋಧಾದಿಗಳ ಬೆಳವಣಿಗೆಗೆ ಅವಕಾಶವಾಗುತ್ತದೆ. ಕಾಮಕ್ರೋಧಾದಿಗಳು ಬದುಕಿನಲ್ಲಿ ಪ್ರಬಲಗೊಂಡಾಗ ಬಾಳು ಹಾಳಾಗುತ್ತದೆ. ಕಣ್ಣೀರಿನ ಕಡಲಾಗುತ್ತದೆ. ಶಾಂತಿ ಸಮೃದ್ಧಿ ಸಂತೋಷಗಳು ಅಡವೀ ಪಾಲಾಗುತ್ತವೆ. ಆದ್ದರಿಂದ ಮನಸ್ಸನ್ನು ಒಲಿಸಿಕೊಳ್ಳುವುದು ಬಹಳ ಕಷ್ಟ. ವಿಧ ವಿಧವಾಗಿ ಕಾಡಿಸುತ್ತದೆ. ಅದು ಒಲಿಯುವುದೇ ಅಪರೂಪ ವಿಶ್ವ ವಿಭೂತಿ ಪುರುಷ ಜೀವನ ಚರಿತ್ರೆಯನ್ನು ವಿಚಾರ ಮಾಡಿದಾಗ ಎಲ್ಲರನ್ನೂ ಕಾಡಿಸಿದ ಉದಾಹರಣೆಗಳಿವೆ. ಮನಸ್ಸನ್ನು ಒಲಿಸಿಕೊಂಡವರೇ ನಿಜಕ್ಕೂ ಮಹಂತರೆನಿಸಿಕೊಳ್ಳುವರು.

—ದುಂಬಿ

# ಒಲಿದು ಬಂದ ಗೌರವ

—ಕೆ. ಬಸವರಾಜು

ಉನ್ನತಾಧಿಕಾರದ ಜೊತೆ ನುಡಿಯೊಡತಿಯ ಒಲುಮೆ ಕೂಡಿರುವುದು ವಿರಳ. ಅದಕ್ಕೆ ಕೇವಲ ನಿದರ್ಶಕರಾಗಿ ನಿಲ್ಲುತ್ತಾರೆ, ಮಾಸ್ತಿ ಮುಂತಾದವರು. ಅಂತಹವರಲ್ಲಿ ಶ್ರೀ ಸಿದ್ಧಯ್ಯ ಪುರಾಣಿಕರೂ ಒಬ್ಬರು. ಮಾಸ್ತಿ ಕನ್ನಡದ ಆಸ್ತಿ ಎನಿಸಿರುವಂತೆ ಪುರಾಣಿಕರು ವಚನ ಸಾಹಿತ್ಯದ ಆಸ್ತಿಯಾಗಿದ್ದಾರೆ. ಮತ್ತು ಕನ್ನಡದ ಕಾವ್ಯಾನಂದರೂ ಆಗಿದ್ದಾರೆ. 'ಕಾವ್ಯಾನಂದ' ಎಂಬುದು ಅವರ ಕಾವ್ಯನಾಮವೂ ಹೌದು.

ರಾಯಚೂರು ಜಿಲ್ಲೆಯಲ್ಲಿ ಜನ್ಮವೆತ್ತಿದ ಶ್ರೀಯುತರು ಎಂಥ ನಿಷ್ಠಾವಂತ ಉನ್ನತ ಅಧಿಕಾರಿಗಳಾಗಿದ್ದರೊ ಅಂತೆಯೇ ಸರಸವಾಗ್ಮಿಗಳೂ ಸಾಹಿತಿಗಳೂ, ವಿಮರ್ಶಕರೂ, ದಾರ್ಶನಿಕರೂ ಮೇಲಾಗಿ ಕವಿಗಳೂ ಆಗಿದ್ದಾರೆ. ಸಹಸ್ರಾರು ಮಂದಿ ರೈತರೂ, ಕಾರ್ಮಿಕರೂ ಅವರಿಂದ ಹೇಗೆ ಪ್ರಯೋಜನ ಪಡೆದಿದ್ದಾರೆಯೋ ಹಾಗೆ ನೂರಾರುಮಂದಿ ಸಹೃದಯರು ಅವರ ಸಾಹಿತ್ಯ ಸುಧೆಯಿಂದ ಹೃದಯ ತುಂಬಿಕೊಂಡಿದ್ದಾರೆ.

ಅತುಲ ದೈವಭಕ್ತಿಯುಳ್ಳ ಸುಸಂಸ್ಕೃತ ವಿದ್ವತ್ ಪರಂಪರೆಯುಳ್ಳ ಶ್ರೀ ಪುರಾಣಿಕರವರು ಸಾಹಿತಿಗಳ ಸತ್ಸಂಗಾಪೇಕ್ಷಿಗಳಾಗಿರುವಂತೆ ಅನೇಕ ಸ್ವಾಮಿಗಳವರ ಅನುಗ್ರಹ ಪಾತ್ರರೂ ಆಗಿದ್ದಾರೆ. ಅದರಂತೆ ಸಿದ್ದಗಂಗಾ ಶ್ರೀಗಳವರ ವಿಷಯದಲ್ಲಿ ಅವರಿಗೆ ಅಚಲ ಭಕ್ತಿ ವಿಶ್ವಾ
ವಿದೆ. ಶ್ರೀ ಶ್ರೀಗಳವರ ಸುವರ್ಣ ಮಹೋತ್ಸವ ಸಂದರ್ಭ
ದಲ್ಲಿ ಅರ್ಪಿಸಲಿರುವ ಸಂಭಾವನಾಗ್ರಂಥವಾದ 'ಸಿದ್ಧಗಂಗಾ
ಶ್ರೀ' ಯ ಸಂಪಾದಕ ಸಮಿತಿಯ ಅಧ್ಯಕ್ಷರಾಗಿದ್ದಾರೆ
ಇದರಂತೆ ಅವರು ಇನ್ನು ಅನೇಕ ಸಾಹಿತ್ಯೋತ್ಸ
ಗಳ ನೇತಾರರಾಗಿ, ಕವಿಗೋಷ್ಠಿಗಳ ಅಧ್ಯಕ್ಷರಾಗಿ ತಮ್ಮ
ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಮತ್ತು ಬಸ
ಸಮಿತಿಯಿಂದ ಹೊರಡುವ ಬಸವಪಥ ಮತ್ತು ಬಸ
ಜರ್ನಲ್ ಪತ್ರಿಕೆಯ ಗೌರವ ಸಂಪಾದಕರಾಗಿರುವುದ
ಅವರ ಉತ್ತಮ ಸಾಹಿತ್ಯ ಸೇವೆಗೆ ಕುರುಹಾಗಿದೆ.

ಇದೆಲ್ಲದುದಕ್ಕಿಂತ ಮಿಗಿಲಾಗಿ ಶ್ರೀಯುತರನ
ಕಲ್ಕತ್ತೆಯ ಭಾರತೀಯ ಭಾಷಾ ಪರಿಷತ್ತು ಗೌರವಿಸಿರ
ವುದು ಕನ್ನಡಿಗರೆಲ್ಲ ಹೆಮ್ಮೆಪಡುವಂತಹ ವಿಷಯವಾಗಿದೆ
ಅವರ 'ವಚನೋದ್ಯಾನ' ಎಂಬ ಸ್ವತಂತ್ರ ಕೃತಿಗೆ
ಸಂಸ್ಥೆ ತನ್ನ ಚೊಚ್ಚಲ ಪ್ರಶಸ್ತಿಯನ್ನು ನೀಡಿದೆ.
ಗೌರವ ಕೇವಲ ಪುರಾಣಿಕರಿಗೆ ಮಾತ್ರವಲ್ಲ ಇಡೀ ಕನ್ನ
ನಾಡ ನುಡಿಗೆ ಸಂದಂತಾಗಿದೆ. ಶ್ರೀ ಪುರಾಣಿಕರೇ ಹೇಳ
ವಂತೆ ಎಡೆಯೂರು ಶ್ರೀ ಸಿದ್ಧಲಿಂಗೇಶ್ವರರ ದರ್ಶನದಿಂ
ಮೂಡಿ ಬಂದ, ಮತ್ತು ಅನೇಕ ವರ್ಷಗಳ ಶ್ರಮ
ಫಲವೇ ಆ ವಚನೋದ್ಯಾನ. ಇನ್ನೂ ಎರಡನೆಯ
ಭಾಗವೂ ಹೊರಬರಬೇಕಾಗಿದೆ. ಇಂಥ ಶ್ರೀ ಪುರಾಣಿ
ರನ್ನು ಬಸವ ಸಮಿತಿ, ಸನ್ಮಾನ ಸಮಿತಿ, ಮುಂತಾ
ಸಮಿತಿಗಳು ಸತ್ಕರಿಸಿ, ಸನ್ಮಾನಿಸಿದುದು ಒಬ್ಬ ಶ್ರೇಷ
ಸಾಹಿತಿಗೆ ಸಂದ ಕೃತಜ್ಞತೆಯ ಸಂಕೇತವಾಗಿದೆ.

ಇದರಂತೆ, 'ಸಿದ್ಧಗಂಗಾ' ಕೂಡ ಶ್ರೀ ಸಿದ್ಧಯ
ಪುರಾಣಿಕರಿಗೆ ತನ್ನ ಶುಭಾಶಂಸನವನ್ನು ಕೋರುತ್ತ
ಅವರಿಂದ ಇನ್ನೂ ಕನ್ನಡ ನುಡಿಯೊಡತಿಯ ಮಡಿಲ
ತುಂಬಲೆಂದು ಹರಸುತ್ತದೆ.

---

( 6 ನೇ ಪುಟದಿಂದ )

ಸಮಾಜದ ನಿರ್ಮಾಣಕ್ಕೆ ಕಾರಣವಾಗುತ್ತದೆ. ಭಾಷಾ ಸಂಸ್ಥೆಯವರು ನೀಡಿರುವ ಗೌರವ ನಾಡಿಗೂ ನುಡಿಗೂ ಗೌರವ ತಂದು ಕೊಟ್ಟಿದೆ. ಶ್ರೀ ಪುರಾಣಿಕರವರ ಪರಿಪಕ್ವ ಭಾವನೆ, ಅವರ ಬುದ್ಧಿವಂತಿಕೆ ಶ್ರೀಮಂತ ಹೃದಯ ಮಂತಿಕೆಗಳು ಇನ್ನು ಉತ್ತಮ ಕೃತಿ ರಚನೆಗೆ
ಸಹಕಾರಿಯಾಗಲೆಂದು ಭಗವಂತನನ್ನು ಪ್ರಾರ್ಥಿಸಿ ಎಲ್ಲ
ರಿಗೂ ಮಂಗಳಾಶೀರ್ವಾದವನ್ನು ಕೋರಿ ಮುಕ್ತಾಯ
ಮಾಡುತ್ತೇನೆ.

# ಮರ್ತ್ಯಲೋಕದ ಮಹಾಬೆಳಗು : ಉದ್ದಾನಯತೀಶ

—ಚನ್ನಪ್ಪ ಎರೇಸೀಮೆ

ಮರ್ತ್ಯಲೋಕವ ಮಹಾಮನೆ ಹಾಳಾಗಿಹೋಗಬಾರದೆಂದು ಕರ್ತನಟ್ಟಿದನಯ್ಯ
ಒಬ್ಬ ಶಿವಶರಣನ. ಆ ಶರಣ ಬಂದು ಕಲ್ಯಾಣವೆಂಬ ಶಿವಪುರವ ಕೈಲಾಸ ಮಾಡಿ,
ರುದ್ರಗಣ, ಪ್ರಮಥಗಣರೆಲ್ಲರ ಹಿಡಿತಂದು, ಅಸಂಖ್ಯಾತರೆಂದು ಹೆಸರಿಟ್ಟು ಕರೆದು,
ಭಕ್ತಿಯ ಸ್ಥಳಕುಳವ ಪ್ರಕಟಿಸಿ ಪವಾಡವಂ ಮೆರೆದು ತೋರಿ, ಜಗವರಿಯೆ
ಶಿವಾಚಾರದ ಧ್ವಜವನೆತ್ತಿ ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಗೆ
ಯಾದನು. ಶಿವಶರಣನ ಮನೆಯೊಳಗಿಪ್ಪ ಶಿವಗಣಂಗಳ ತಿಂಥಿಣಿಯ ಕಂಡು.
ಯೆನ್ನ ಮನ ಉಬ್ಬಿ ಕೊಬ್ಬಿ ಓಲಾಡುತ್ತಿದ್ದೆನಯ್ಯ, ನಮ್ಮ ಗುಹೇಶ್ವರನ ಶರಣ
ಸಂಗನ ಬಸವಣ್ಣನ ದಾಸೋಹದ ಘನವನೇನೆಂದೆನಬಹುದು ನೋಡಾ; ಸಿದ್ಧರಾಮಯ್ಯ.

ಶಿವಯೋಗಿಯು ಸುಳಿದ ಸುಳುಹು ಜಗತ್ಪಾವನ;
ಮೆಟ್ಟಿದ ಧರೆಯೆಲ್ಲ ಪವಿತ್ರ;
ನಿಮಿಷಾರ್ಧವಿದ್ದ ಸ್ಥಲವೆಲ್ಲ ಅವಿಮುಕ್ತ ಕ್ಷೇತ್ರ;
ಹೊಕ್ಕ ಜಲವೆಲ್ಲ ಪುಣ್ಯತೀರ್ಥ;
ಏರಿದ ಬೆಟ್ಟವೆಲ್ಲ ಶಿವಪರ್ವತ;
ಕೃಪೆಯಿಂದ ನೋಡಿದ ಜನರೆಲ್ಲ ಸಾಲೋಕ್ಯರು;
ಒಡನೆ ಸಂಭಾಷಿಸಿದವರೆಲ್ಲ ಸದ್ಯೋನ್ಮುಕ್ತರು,
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

## ಹುಡುಗನಾರು ?

ಲಕ್ಕೂರಿನ ಪಟೇಲ್ ಗಟ್ಟಿಪ್ಪಮರುಳಸಿದ್ದಮ್ಮ ...ಂಪತಿಗಳ ಕಾಯಕನಿಷ್ಠೆ ಗುರುಲಿಂಗ ಜಂಗಮಸೇವಾ ...ರೀಣತೆ, ದಾಸೋಹ ಸದ್ಭಾವಗಳು, ಸುತ್ತುಮುತ್ತೆಲ್ಲ ...ಸಿದ್ಧ. ಶರಣ ಜನ ಸಮುಚಿತವಾದ ಅವರ ಕಾಯಕ ...ಷ್ಠೆಯಿಂದ ಅವರಿಗೆ ಸಮಸ್ತ ಸೌಭಾಗ್ಯಗಳೂ ಲಭ್ಯವಾಗಿದ್ದವು. ಬೇಸಾಯ ಕಾಯಕ, ಮನೆತುಂಬವ ದನಕರು, ದುಡಿಯುವ ಮಕ್ಕಳು, ಏನೆಲ್ಲ ಸುಖ ಅವರದಾಗಿತ್ತು. ಇಂಥ ಸದ್ಭಕ್ತ ದಂಪತಿಗಳ ಬಳಿವಿಡಿದು 'ಭಕ್ತ ದೇಹಿಕ ದೇವನಪ್ಪದೇವನು' ಬರುವುದುಂಟೆಂದು ಬಸವಣ್ಣನವರ ದೃಢನಂಬಿಕೆ.[1] ಅದರಂತೆ ಗಟ್ಟಪ್ಪ ಮರುಳಸಿದ್ದಮ್ಮ ದಂಪತಿಗಳ ಗುರುಲಿಂಗಜಂಗಮ ಸೇವಾಮನೋಭಾವದ ಪರೀಕ್ಷೆಗೆಂದೋ ಏನೋ ಮಹಾಜಂಗಮ ಮೂರ್ತಿಗಳೊಬ್ಬರು ಒಮ್ಮಿಂದೊಮ್ಮೆಗೆ ಲಕ್ಕೂರಿಗೆ ಬಂದು ನೇರವಾಗಿ ಇವರ ಮನೆಗೆ ನಡೆತಂದರು. ಅವರು ಬಂದುದು ಒಂದು ಮಹಾ ಕಾರಣಕ್ಕಾಗಿ, ಮರೆತು ಮಲಗಿದ್ದವನನ್ನು ಎಚ್ಚರಿಸಲಿಕ್ಕಾಗಿ, ಬಂದ ಜಂಗಮ ಪುಂಗವರನ್ನು ಭಯಭಕ್ತಿಯಿಂದ ಬರಮಾಡಿಕೊಂಡು ಪೂಜೆಗಣಿಮಾಡಿದರು. ಆ ವಿರಕ್ತಮೂರ್ತಿ ಹರ್ಷಚಿತ್ತದಿಂದ ಪೂಜೆ ಮುಗಿಸಿ ಎಲ್ಲ

---

1 ಭಕ್ತ ದೇಹಿಕ ದೇವನಪ್ಪ ದೇವರು ಸದ್ಭಕ್ತರ ಬಳಿವಿಡಿದು ಬಪ್ಪನಾಗಿ ಅಳ್ಳಸು ಬರಲು ಆಳು ಮಂಚದ ...ೇಲಿರುವುದು ಗುಣವೇ ಹೇಳಾ, ಕೂಡಲ ಸಂಗಮದೇವನು ಜಂಗಮರೂಪಾಗಿ ಬಂದನೆಂದೂ ಎಂದೆಂದೂ ನಾನು ...ಂಚವನ್ನೇರದ ಭಾಷೆ-ಸದ್ಭಕ್ತರ ಭಕ್ತಿ ಪರೀಕ್ಷೆಗೆ ಮಾತ್ರವೇ ದೇವನು ಅನೇಕ ವಿಧದಲ್ಲಿ ಬರುತ್ತಾನೆಂದು ಶಿವಶರಣರ ...ಬಿಕೆ. ಭಕ್ತ ಭಕ್ತಿಯೇ ಇಲ್ಲದವರ ಪರೀಕ್ಷೆಯ ಗೊಡವೆ ದೇವನಿಗೇಕೆ? ಪರೀಕ್ಷೆಗಾಗಿ ಓದಿ ತತ್ಸಂಬಂಧದ ನಿಯಮದಂತೆ ...ಲ್ಯ ಕಟ್ಟಿದವನಿಗೆ ತಾನೆ ಪರೀಕ್ಷೆ. ಕಂಡ ಕಂಡವರನ್ನೆಲ್ಲ ಪರೀಕ್ಷಿಸುವ ಅವಶ್ಯಕತೆ ಬರುವುದಿಲ್ಲವಷ್ಟೇ. ಬಸವಣ್ಣನವರು ...ಕ್ತಿ ಸ್ಥಲದಲ್ಲಿ ವ್ಯವಹರಿಸುತ್ತಿದ್ದ ಮಹಾ ದಾಸೋಹಿಗಳು ಅಂತೆಯೇ ಅವರ ಪರೀಕ್ಷೆಯು ಅನೇಕ ಮುಖದಲ್ಲಿ ನಡೆದಿದೆ. ...ದ್ಭಕ್ತರೆನಿಸಿದವರಿಗೆಲ್ಲ ಈ ಪರೀಕ್ಷೆ ಉಂಟೇಉಂಟು.

ತೀರ್ಥಪ್ರಸಾದವಿತ್ತು ತಾವೂ ಪ್ರಸಾದ ಮುಗಿಸಿ
ಆಗ ಆಜಾನುಭಾಹುವೂ, ಸಮದ ವೃಷಭ ಗಂಭೀ
ಸ್ವನಿವಿಶೇಷವುಳ್ಳವನೂ, ಬಂಧುರವಾದ ಮೈಕಟ್ಟುಳ್ಳ
, ಮಿಂಚಿನಂತೆ ಹೊಳೆಯುವ ನೇತ್ರ ದ್ವಯದವನೂ
14–15 ವರ್ಷ ವಯಸ್ಸಿನ ಹುಡುಗ ಸ್ವಾಮಿಗಳ
ಾದಗಳಿಗೆ ನಮಸ್ಕರಿಸಿದನು. ಶ್ರೀಗಳವರ ಸಮಗ್ರ
ಧೈರ್ಯಮೇರುವಿನಂತೆ ಕಂಡ ಇವನ ಮೇಲೆ
ಕರ ರೀತಿಯಲ್ಲಿ ಕೇಂದ್ರಿಕೃತವಾಯಿತು. ಗಟ್ಟಪ್ಪ
ಸ್ವಾಮಿಗಳವರಿಗೆ 'ಬುದ್ಧಿ' ಇವನೇ ತಮ್ಮ ಕಿರಿಯ
ಬಲು ತುಂಟ; ಸ್ವತಂತ್ರ ಸ್ವಭಾವದ ಇವನಿಗೆ
ೂ ಏನೂ ಹೇಳುವಂತಿಲ್ಲ, ತಾನುಂಟೋ ಮೂರು
ನ್ವಂಟೋ ಎಂಬಂತೆ ಇವನ ವ್ಯವಹಾರ.
ವರೂ ಮೌನಗೊಳ್ಳುತ್ತಾನೆ. ಈ ಕಾಣುವ ಸಿದ್ಧನ
ಅಡವಿಯೊಳಗಿನ ಗುಹೆಗಹ್ವರಗಳಾಯಿತು ಇವ
ತು. ಇವನಿಗೆ ತಮ್ಮ ಆಶೀರ್ವಾದ ಚೆನ್ನಾಗಿ ಆಗ
. ಎಂದು ಲೋಕೋಚಿತ ಗೃಹಸ್ಥನ ನುಡಿಯಿಂದ
. ಶಿವಯೋಗಿಗಳು ಕ್ಷಣಕಾಲ ಮೌನವಾಗಿ ನವು
ಎದ್ದುನಿಂತ ಈ ಹುಡುಗನನ್ನೇ ದಿಟ್ಟಿಸಿ ನೋಡಿ
ಹುಡುಗನ ದೃಷ್ಟಿಯೊಡನೆ ತಮ್ಮ ದೃಷ್ಟಿಯನ್ನು
ಇವನಿಗೆ ನಾವು ಆಶೀರ್ವದಿಸುವುದೇನಿದೆ? ಈತ
ಮಗನಾಗಿರುವುದೊಂದು ನಿಮಿತ್ತ ಅಷ್ಟೇ ಇವನ
ಲ ಭವಿಷ್ಯ ತಮ್ಮನ್ನೂ ಮೂಕವಿಸ್ಮಿತಗೊಳಿಸಿದೆ.
ಾರ್ಯತೇಜಶಾಲಿಯಾದ ಈತನು ನಡೆದುದೇ
ರ್ಗ; ಆಡಿದುದೇ ಕ್ರೀಡೆ, ಶಿವನ ಮನಕರಿಯಂತೆ
ಎಂದು ನಕ್ಕು ಸುಮ್ಮನಾದರು. ತಂದೆತಾಯಿ
ಬಳಗದವರಿಗೆ ಶ್ರೀಗಳವರ ಈ ನುಡಿ ಎಷ್ಟು ಅರ್ಥ
ತೋ ಏನೋ ಹುಡುಗನಿಗೆ ಒಂದು ಬಾಳೇ
ನ್ನು ಆಶೀರ್ವದಿಸಿ ಕೊಟ್ಟರು. ಹುಡುಗ ಆ
ನ್ನು ಸ್ವೀಕರಿಸಿ ಮತ್ತೊಮ್ಮೆ ಪಾದ ಮುಟ್ಟಿ ನಮಸ್ಕ

ರಿಸಿ, ಹೊರಗೆ ಬಂದು ಕುಳಿತುಕೊಂಡರು. ಸ್ವಾಮಿಗಳವರು ಮನೆಯವರಿಗೆಲ್ಲ ಶಿಷ್ಟಾಚಾರದಂತೆ ಆಶೀರ್ವದಿಸಿ ಹೊರಟರು. ಎಲ್ಲರೂ ನಮಸ್ಕರಿಸಿ ಬೀಳ್ಕೊಟ್ಟರು. ಸ್ವಾಮಿಗಳು ಹೊರಬರುವುದನ್ನೇ ಕಾಯುತ್ತಾ ಕುಳಿತ್ತಿದ್ದ ಹುಡುಗ, ಸ್ವಾಮಿಗಳು ಹೊರ ಹೊರಟೊಡನೇ ಅವರ ಬೆನ್ನು ಹತ್ತಿ ಹೋಗಿ ಸ್ವಾಮಿಗಳವರಿಗೆ ಪುನಃ 'ಸ್ವಾಮಿ ತಾವು ಕೈಯಲ್ಲಿ ಹಿಡಿದಿರುವ ಪುಸ್ತಕವನ್ನು ನನಗೆ ಓದಲಿಕ್ಕೆ ಕೊಡುತ್ತೀರಾ ?' ಎಂದು ಕೇಳಿದನು. ಹುಡುಗನ ಮಾತಿನಲ್ಲಿ ಗಡಸು ಇತ್ತು, ಕೆಚ್ಚಿತ್ತು. ಶಿವನ ಕೈಯಲಗಿನ ಮೊನಚಿತ್ತು. ಸ್ವಾಮಿಗಳು "ಪುಸ್ತಕವನ್ನು ಕೊಡಬಹುದು, ಆದರೆ ಇದನ್ನು ಓದಿ ಇದರಂತೆ ನಡೆದುಕೊಳ್ಳುವುದಕ್ಕೆ ಆಗುತ್ತದೆಯೆ ಇದನ್ನು ಓದಿದ ಮೇಲೆ ಇದರಂತೆ ನಡೆಯಬೇಕು. ಸುಮ್ಮನೆ ಓದಿದರೇನು ಫಲ. ಎಂದರೆ ಹುಡುಗ ದಿಟ್ಟತನದಿಂದ 'ಓಹೋ ! ಅದರಲ್ಲಿರುದವುನ್ನು ಓದಿ ಅದರಂತೆ ನಡೆದುಕೊಳ್ಳುತ್ತೇನೆ. ಕೊಟ್ಟು ನೋಡಿ" ಎಂದನು. ಶ್ರೀಗಳವರು ಪರಿಪೂರ್ಣ ತೃಪ್ತಿಯ ನಿಟ್ಟುಸುರು ಬಿಟ್ಟು ಸಂತೋಷದಿಂದ ತಮ್ಮ ಕೈಯಲ್ಲಿರುವ ಗ್ರಂಥವನ್ನು ಕೊಟ್ಟು ಆಶೀರ್ವದಿಸಿದರು.[2]

ಆ ಪುಸ್ತಕವನ್ನು ಸಿದ್ಧನ ಬೆಟ್ಟದಲ್ಲಿ[3] ತನ್ನ ಕುರಿ ಮೇಕೆಗಳನ್ನು ಮೇಯಲು ಬಿಟ್ಟು ಅವರು ಮೈ ಮೇಲೆ ಎಚ್ಚರವಿಲ್ಲದಂತೆ ಶ್ರದ್ಧಾಶಕ್ತಿಯಿಂದ ಓದ ತೊಡಗಿದರು. ಕೆಲವೇ ವಾರಗಳಲ್ಲಿ ತನ್ನ ಮೇಕೆಯ ಮಂದೆಯಲ್ಲಿ ಒಂದು ಮೇಕೆಯನ್ನು ಮಾರಿ ಬಂದ ಹಣವನ್ನು ತೆಗೆದುಕೊಂಡು ಸ್ವಯಂಪ್ರೇರಿತನಾಗಿ ಗುಂಡಿಗೆರೆಗೆ ಹೋಗಿ ಅಲ್ಲಿದ ಮಠದಲ್ಲಿ ಶಿವದೀಕ್ಷಾ ಸಂಸ್ಕಾರ ಮಾಡಿಸಿಕೊಂಡು ಬಂದನು. ಹುಡುಗನ ಪೂಜಾನಿಷ್ಠೆ ಸೇವಾ ಮನೋಭಾವ ಅಧಿಕಗೊಂಡವು. ಮನೆಯಲ್ಲಿನ ಪೂಜೆ ಸಾಲದೆಂಬಂತೆ ಸಿದ್ಧನ ಬೆಟ್ಟದಲ್ಲಿ ತನ್ನ ಮೇಕೆಯ ಮಂದೆಯನ್ನು ಮೇಯ ಬಿಟ್ಟು ಗಿಡಗಂಟಿಗಳಲ್ಲಿ ಹೂ

---

2 ಆ ಪುಸ್ತಕವಾವುದು ಎಂಬುದು ಗೊತ್ತಾಗುತ್ತಿಲ್ಲ. ಕೆಲವರು 'ಜ್ಞಾನಸಿಂಧು' ಎಂಬ ಪುಸ್ತಕವೆಂದೂ, ಮತ್ತೆ
ು ಶಿವಶರಣರ ವಚನದ ಪುಸ್ತಕವೆಂದೂ ಹೇಳುವುದುಂಟು. ಅದು ನೀಲಿಕಾಗದದಲ್ಲಿ ರಾಗಿಮಸಿಯಿಂದ ಬರೆದ ಪುಸ್ತಕ
ಮಾತ್ರ ಈ ವಿಷಯ ತಿಳಿದ ಓರ್ವ ವೃದ್ಧರು ಹೇಳುತ್ತಾರೆ.

3 ಲಕ್ಕೂರಿನ ಸಮೀಪದ ಪಶ್ಚಿಮ ದಿಗ್ಭಾಗದಲ್ಲಿ ಒಂದು ಮೈಲು ಅಂತರದಲ್ಲಿರುವ ಇತಿಹಾಸಪ್ರಸಿದ್ಧವಾದ ಒಂದು ಅನೇಕ ಗುಹೆಗಳಿಂದಲೂ, ಗುಹೆಗಳಲ್ಲಿರುವ ಶಿವಲಿಂಗಗಳಿಂದಲೂ, ವೀರಭದ್ರಾದಿ ದೇವಾಲಯ ಕೋಟೆ ಕೊತ್ತಲು ಇತ್ಯಾದಿ ಅನೇಕ ಪ್ರಾಚೀನ ಅವಶೇಷಗಳಿಂದ ಕೂಡಿರುವ ಒಂದು ಗುಡ್ಡ.

...ದು ತಂದು ದೊಣೆ ಮಡುಗಳಲ್ಲಿ ಸ್ನಾನ ಘಂಟೆಗಳ ಅರಿವಿಲ್ಲದೆ ಶಿವಪೂಜೆಯಲ್ಲಿ ...ಗಿದನು. ಒಂದು ಹೊತ್ತು ಪ್ರಸಾದ ಕೇವಲ ಬಿಲ್ವಪತ್ರೆಯನ್ನೇ ಪ್ರಸಾದ ...ಸತೊಡಗಿದನು. ಸ್ನಾನ ಪೂಜೆಗಳಿ ...ದಲ್ಲಿಯೇ ಎಂದೂ ಊಟೋಪಚಾರ ... ತನ್ನ ಒಂದು ಜೋಳಿಗೆಯಲ್ಲಿ ಪಶು ...ದಿದ್ದರೂ ಸಕ್ಕರೆಯ ಪಟ್ಟಣ, ಭಸ್ಮ ...ಡಿಕೆಗಳನ್ನು ಇಟ್ಟುಕೊಂಡು ಕಂಡಕಂಡ ...ಜೆಯನ್ನು ಅತ್ಯಂತ ಗೌಪ್ಯದಿಂದ ಆಚ ... ಸಕ್ಕರೆಯನ್ನು ಇರುವೆಗಳ ಗೂಡನ್ನ ...ಕೆ ಹಾಕತೊಡಗಿದನು. ಹುಡುಗನ ಈ ...ಚರ್ಯೆಗಳನ್ನು ಕಂಡು ಇವನನ್ನು ಇವ ... ಇತ್ಯಾದಿ ಮಾತುಗಳಿಂದ ಕಂಡಕಂಡವ ...ಡಿಯತೊಡಗಿದರು. ಈ ಹುಡುಗನ ...ರೆಯಲ್ಲಿ ಶಿವಸಂಸ್ಕಾರಸಂಪತ್ತಿನ ಅಪೂರ್ವ ...ೊಳೆಯತೊಡಗಿತು. ಶಿವಯೋಗದ ...ಮೊಳೆಯೊಡೆದು ಮರವಾಗತೊಡಗಿತು. ...ರು? ಹರದನಹಳ್ಳಿಪೀಠದ ಗೋಸಲ ...ವರ ಪರಂಪರೆಯ ಶಂಕರಸ್ವಾಮಿಗಳು, ...ರು, ಸಿದ್ಧಲಿಂಗೇಶ್ವರರೇ ಮೊದಲಾದ ...ಶಾಲಿಗಳ ತಪೋನುಷ್ಠಾನ ಸುಕ್ಷೇತ್ರವೂ ...ದಾಸೋಹಸದ್ಭಾವದಲ್ಲಿ ಇಂದು ಭಾರ ...ಶೈಕ್ಷಣಿಕ ಧಾರ್ಮಿಕ ಕೇಂದ್ರವೆಂದು ಪರಿ ...ದೂ ಆದ ಶ್ರೀ ಸಿದ್ಧಗಂಗಾಕ್ಷೇತ್ರಾಧಿಪತ್ಯದ ಪೂರ್ಣ ಹೊಣೆಯನ್ನು 1901ನೆಯ ಕಾರ್ತಿಕ ಮಾಸ ದಿಂದ ವಹಿಸಿ, ಅದರ ಲೋಕೋತ್ತರ ಕೀರ್ತಿವಿಶೇಷಕ್ಕೆ ತಮ್ಮ ಲಿಂಗತಪಶ್ಯಕ್ತಿ ಸಂಜನಿತ ಕಾರುಣ್ಯ ಜಲಧಾರಾ ವರ್ಷವನ್ನು ಕರೆದು ಬೆಳೆಸಿ, ಮಹಾತಪಸ್ವಿ-ಶಿಷ್ಯೋತ್ತಮ ಡಾ॥ ಶ್ರೀ ಶಿವಕುಮಾರಸ್ವಾಮಿಗಳವರ ಕೈಗಿತ್ತು ಹೋದ ಶ್ರೀ. ನಿ. ಪ್ರ. ಲಿಂ 10 ಉದ್ದಾನಶಿವಯೋಗಿಗಳು ಬಾಲ್ಯ ದಲ್ಲಿಯೇ ಅದ್ಭುತ ತಪಶ್ಯಕ್ತಿಯನ್ನು ಸಾಧಿಸಿ ಅನೇಕ ಪವಾಡಗಳನ್ನು ಬಾಲ್ಯದಲ್ಲಿಯೇ ನಟಿಸಿ ಇಹಪರದ ಪುಣ್ಯಪುರುಷನೆಂದೂ ಕಾರುಣ್ಯ ಮೂರ್ತಿಯೆಂದೂ ಅನಿಮಿತ್ತ ಬಂಧುವೆಂದೂ: ತ್ರಿವಿಧ ದಾಸೋಹ ಸದ್ಭಾವ ಮೂರ್ತಿಯೆಂದೂ ವಶ್ಯವಾಕ್ ಶಕ್ತಿಯುಳ್ಳವರೆಂದೂ ಕೀರ್ತಿತರಾದ ಉದ್ದಾನಶಿವಯೋಗಿಗಳ ಪೂರ್ವಾಶ್ರಮದ ಹೆಸರು ರುದ್ರಪ್ಪ. ಓದಲು ಇವನಿಗೆ ಪುಸ್ತಕವನ್ನು ಇಟ್ಟು ಆಶೀರ್ವದಿಸಿದ ಮೂರ್ತಿಗಳೇ ಮಹಾ ಮಹಿಮರೆಂದೂ ಶುದ್ಧಿಯಿಂದ ಸಿದ್ಧಪುರುಷರೆಂದೂ ಕೀರ್ತಿತರಾದ ಫಲಹಾರ ಸ್ವಾಮಿಗಳು.[4]

## ಲಕ್ಕೂರಿನ ಪುಣ್ಯ ದಂಪತಿಗಳು :

## ಗಟ್ಟಿಪ್ಪ— ಮರುಳಸಿದ್ಧಮ್ಮ

ಬೆಂಗಳೂರು ಜಿಲ್ಲಾ ನೆಲಮಂಗಲ ತಾಲ್ಲೂಕು ದಾಬಸಪೇಟೆಗೆ ಸಮೀಪದಲ್ಲಿ ಕೇವಲ ಮುಕ್ಕಾಲು ಮೈಲು ಸರಿ ಸುಮಾರಿನಲ್ಲಿ ಇರುವ ಲಕ್ಕೂರು ಎಂಬ ಹಳ್ಳಿ ಇದೆ. ದಕ್ಷಿಣ ಕಾಶಿ ಎನಿಸಿ ಪುಣ್ಯಪುರುಷರ ಪಾದಧೂಳಿಯಿಂದ ಪವಿತ್ರೀಕೃತವಾದ ಶಿವಗಂಗೆಯಿಂದ ಉತ್ತರದಿಕ್ಕಿನಲ್ಲಿ ಇದೆ. ಅನೇಕ ಸಿದ್ಧಪುರುಷರ ನೆಲೆಬೀಡಾದ ಸಿದ್ಧನಬೆಟ್ಟ ಒಂದು

---

4 ಫಲಹಾರ ಸ್ವಾಮಿಗಳವರ ಚರ್ಯೆ ಅತ್ಯಂತ ವಿಚಿತ್ರ. ಅವರ ಪ್ರಸಾದ ಸೇವನೆಯು ಅಷ್ಟೆ ವಿಚಿತ್ರ. ...ಸ ಮಾಡಿದ ಉಸುಳಿ, ಮೆಣಸಿನಕಾಯಿಯ ಕಾರದ ಒಂದು ಮುದ್ದೆ, ಸ್ವಲ್ಪ ತುಪ್ಪ, ಇದೇ ಇವರ ಆಹಾರ. ...ದಕ್ಷಿಣದಿಗ್ಭಾಗದಲ್ಲಿ ಸೋಲೂರು ಸಮೀಪದಲ್ಲಿರುವ ಹರಣದಲ್ಲಿರುವ ಮಹಂತೇಶ್ವರ ಗದ್ದಿಗೆಯನ್ನು ಕಟ್ಟಿ... ಮಹಂತೇಶ್ವರರು ಶಿವಯೋಗ ನಿಷ್ಠಾಗರಿಷ್ಠರೆಂದು, ಅವರು ಲಿಂಗೈಕ್ಯವಾದ ಸ್ಥಳವು ಇದೇ ಎಂದು ಗುರು...ಗೆ ಕಟ್ಟಿಸಿದರಂತೆ. ಮಹಂತೇಶ್ವರರ ಕಾಲಾದಿಗಳು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಶಿವಗಂಗೆಯ ಸುತ್ತ ಮುತ್ತ ...ಶಿವಶರಣರ ಗದ್ದುಗೆಗಳಿದ್ದು ಅವುಗಳ ಚರಿತ್ರೆ ಕಾಲಗರ್ಭದಲ್ಲಿ ಅಸ್ಪಷ್ಟವಾಗಿಯೇ ಅಡಗಿ... ಫಲಹಾರ ಸ್ವಾಮಿಗಳು ಲಕ್ಕೂರಿನ ಗಟ್ಟಿಪ್ಪನವರ ಮನೆಗೆ ಬಂದುದು ಆಕಸ್ಮಿಕವೆಂದೂ ಅವರ ಬರುವಿಕೆ... ...ರುದ್ರಪ್ಪನನ್ನು ಕಾಣುವುದೇ ಪ್ರಧಾನೋದ್ದೇಶವಾಗಿತ್ತೆಂದೂ ಮೊನ್ನೆ ಮೊನ್ನೆವರೆಗಿದ್ದ ಲಕ್ಕೂರಿನ ವೃದ್ಧರ...ಲ್ಲಿ ಮುಖ್ಯಂದವರೆಂದರೆ ರುದ್ರಪ್ಪನ ಅಣ್ಣ ಭೈರಪ್ಪ ಎಂಬುವರು ಮಗಳು ಗಂಗಮ್ಮನವರ ಗಂಡ ಶತಾಯುಷಿ ಎಂಬುವರು. ಅನೇಕ ಹಳೆಯ ಚರಿತ್ರೆಯನ್ನು ನೆನೆನೆನೆದು ಆ ಕಾಲಗರ್ಭದಿಂದ ಅವನ್ನು ಹೊರತೆಗೆದು...ರು. ಇವರ ಮಾತುಗಳು ಮತ್ತು ಲಕ್ಕೂರಿನ ಮಠೊಬ್ಬ ಅತಿ ವೃದ್ಧ ಮಲ್ಲಜ್ಜ ಎಂಬುವರ ಮಾತುಗಳು ...ಬಗೆವಣಿಗೆ ಕಾರಣವಾಗಿದೆ. ( 1978 ರ ಆಷಾಢಮಾಸದಲ್ಲಿ ಇವರಿಬ್ಬರನ್ನೂ ಸಂಧಿಸಿ ಉದ್ದಾನಸ್ವಾಮಿಗಳ ...ಕಥೆಯನ್ನು ಸಂಗ್ರಹಿಸಲಾಗಿದೆ. )

ಮೈಲು ಅಂತರದಲ್ಲಿ ಪಶ್ಚಿಮ ದಿಗ್ಭಾಗದಲ್ಲಿದೆ. ರೇವಣ ಸಿದ್ಧೇಶ್ವರ, ಮರುಳಸಿದ್ಧೇಶ್ವರ, ಸಿದ್ಧರಾಮೇಶ್ವರ, ರುದ್ರ ಮುನಿ ಸ್ವಾಮಿಗಳವರ, ಸಂಚಾರದಿಂದ ಪವಿತ್ರೀಕೃತ ವಾದ ಈ ಪುಣ್ಯ ಭೂಮಿಯಲ್ಲಿ ಏಳೆಂಟು ನೂರು ವರ್ಷಗಳಿಂದ ಅವಿಚ್ಛಿನ್ನ ಧಾರೆಯಾಗಿ ಹರಿದು ಬಂದ ತಪಸ್ಸಿನ ಫಲದ ರಾಶಿ ಲಕ್ಕೂರಿನ ಪುಣ್ಯ ದಂಪತಿಗಳ ಪುಣ್ಯ ಗರ್ಭಾಂಬುಧಿಯಲ್ಲಿ ಸುಮಾರು 1860 ರಲ್ಲಿ ಗಂಡು ಮಗುವಿನ ರೂಪದಲ್ಲಿ ಜನಿಸಿತ್ತು. ಆ ಧರ್ಮ ಕ್ಷೇತ್ರದ ಫಲ ನೆಲದಲ್ಲಿ ಜನಿಸಿದ ಮಗನ ಮೇಲೆ ಕೆಲಸ ಮಾಡಿತು. ಮಗುವಿಗೆ ತಮ್ಮ ಮನ ದೇವರಾದ ಸಿದ್ಧನ ಬೆಟ್ಟದ ಉದ್ಧನ ವೀರಭದ್ರನ ಹೆಸರನ್ನೇ ರುದ್ರಪ್ಪ ಎಂದು ಇಟ್ಟರು. ರುದ್ರಪ್ಪ, ಗಟ್ಟಿಪ್ಪ ಮತ್ತು ಮರುಳ ಸಿದ್ದಮ್ಮನವರ ಹೊಟ್ಟೆಯಲ್ಲಿ ಒಬ್ಬಂಟಿಗನಾಗಿ ಹುಟ್ಟಿ ಬಂದವನಲ್ಲ. ರುದ್ರಪ್ಪ (ದೊಡ್ಡ ರುದ್ರಪ್ಪ) ಹುಚ್ಚಣ್ಣ ಭೈರಪ್ಪ, ಗುಂಡಯ್ಯ, ಗಟ್ಟೀಭೈರಪ್ಪ, ಎಂಬ ಐದು ಜನ ಅಣ್ಣಂದಿರನ್ನು ಬಸಮ್ಮ, ಲಿಂಗಮ್ಮ' ಪುಟ್ಟಲಿಂ ಗಮ್ಮ, ಹೊನ್ನಮ್ಮ ಎಂಬ ನಾಲ್ವರು ಸಹೋದರಿಯ ರನ್ನು ಪಡೆದಿದ್ದ. ರುದ್ರಪ್ಪ ತುಂಬು ಸಂಸಾರದಲ್ಲಿ ಹುಟ್ಟಿ ಬಂದವನು. ಗಟ್ಟಿಪ್ಪನವರು ಊರಿನ ಪಟೇಲರು ನೂರಾರು ಎಕರೆ ಜಮೀನನ್ನು ಹೊಂದಿ ಕೃಷಿ, ಕಾಯ ಕದಲ್ಲಿ ಸುತ್ತಮುತ್ತಣ ಪ್ರಾಂತದಲ್ಲೆಲ್ಲ ಹೆಸರು ವಾಸಿಯಾದವರು. ಸುಮಾರು ಎರಡು ನೂರರಷ್ಟು ಕುರಿ ಮೇಕೆಗಳ ಹಿಂಡು. ನೂರಾರು ದನಕರುಗಳು. ಶ್ರದ್ಧಾ ಭಕ್ತಿ ವಿಶ್ವಾಸದಿಂದ ಕೃಷಿ ಕಾಯಕ ಮಾಡು ತ್ತಿದ್ದ ಇವರ ಮನೆಯಲ್ಲಿ ನೂರಾರು ಕಂಡುಗ ದವಸ ಧಾನ್ಯ ತುಂಬಿರುತ್ತಿತ್ತು. ಮನೆಗೆ ದಿನವು ಹತ್ತಿಪ್ಪತ್ತು ಜನರಾದರೂ ಬಂದು ಊಟ ಮಾಡಿಕೊಂಡು ಹೋದರೆ ಈ ಪುಣ್ಯ ದಂಪತಿಗಳಿಗೆ ತೃಪ್ತಿ. ಶ್ರಾವಣ ಮಾಸ ಮಹಾನವಮಿಗಳಲ್ಲಿ ಮನೆಯಲ್ಲಿ ರೇವಣ ಸಾಂಗತ್ಯ ಶರಣಲೀಲಾಮೃತ ಗ್ರಂಥಗಳ ಪಠನ ತಪ್ಪುತ್ತಿರಲಿಲ್ಲ. ಆಗಾಗ ಮನೆಯಲ್ಲಿ ಗಣ ಪರ್ವಗಳು ನಡೆದು ಅನ್ನ ಸಂತರ್ಪಣೆ ನಡೆಯುತ್ತಿತ್ತ. ಈ ಎಲ್ಲ ಕಾರಣದಿಂದ ಗಟ್ಟಿಪ್ಪನವರ ವಿಷಯದಲ್ಲಿ ಸುತ್ತ ಮುತ್ತಲ ಹಳ್ಳಿಯವ ರಿಗೆಲ್ಲ ಪೂಜ್ಯ ಭಾವ. ರುದ್ರಪ್ಪನೇ ಇವರ ಕಿರಿಯ ಮಗ. ತಂದೆ ತಾಯಿಯರಿಬ್ಬರ ವಾತ್ಸಲ್ಯ ರುದ್ರಪ್ಪನ ವಿಷಯದಲ್ಲಿ ಅತ್ಯಧಿಕ. ಅಲ್ಲದೆ ರುದ್ರಪ್ಪನ ಹುಟ್ಟೇ ಎಲ್ಲ ಮಕ್ಕಳ ಹುಟ್ಟಿನಂತಿರಲಿಲ್ಲ. ಇವನ ಜನನ ವಿಷ ಯದಲ್ಲಿ ಒಂದು ಅದ್ಭುತ ಘಟನೆ ನಡೆದು ಇವನಾವ ಮಹಾಪುರುಷನೋ ಏನೋ ಎನ್ನುವ ಒಂದು ಬಗೆಯ ಆಂತರಿಕ ನಂಬುಗೆ ಅವರಲ್ಲಿ ಬಲಿತು ಬರುವುದಕ್ಕೂ ಒಂದು ಕಾರಣವಿತ್ತು.

( ಮುಂದುರಿಯುವುದು )

---

## ಶಿದ್ದೇಶ್ವರ

ಕೆ. ವಿರೂಪಾಕ್ಷಗೌಡ

ಲೋಕಕರ್ತಾದ ದೇವಿಗೆ ಪುರುಷಾದ ಶಿವನಾಗಿ ಇದ್ದ ಶಿದ್ದಯ್ಯನೊ
ರುದ್ರನ ಪಾದವ ಒದ್ದಿಸಿ ನೆನಸುವೆ ಸದ್ಗುರುನಾದ ಶಿದ್ದಯ್ಯನೊ
ಬುದ್ಧಿಗೆ ಪರವಾದ ಶಿದ್ದಯ್ಯನವರ। ಶಿವಭಕ್ತರ ಮನೆಯೊಳು ಶಿದ್ದಯ್ಯನು
ಗೊಲ್ಲಾಳರಾಯನ ಕುರಿಹಾಲದೋಗಿ। ಗೊಲಗೇರಿಲಿಂಗಾದ ಶಿದ್ದಯ್ಯನೊ
ಗೊಲ್ಲಾಳನ ಭಕ್ತಿಗೆ ಮೆಲ್ಲಕ ಶಿವಬಂದು। ಮಡದಿಯ ಬೇಡಿದ ಶಿದ್ದಯ್ಯನು
ಮಡದಿಯ ಭಾವಕ್ಕ ಮಹದೇವ ತಾ ಮೆಚ್ಚಿ। ಮಲಿಹಾಲ ವುಂಡೆದ್ದ ಶಿದ್ದಯ್ಯನು
ಚಂಗಳವನ ಮನಿಯೊಳು। ಜೆಂಗಮರೂಪಾಗಿ ಶಿಸುವಿನ ಬೇಡಿದ ಶಿದ್ದಯ್ಯನು
ಚನ್ನಯ್ಯನ ಮನಿಯಲ್ಲಿ ಚೆಂದಾಗಿ ತಾಹೋಗಿ ಅಂಬಲಿಯ ವುಂಡೆದ್ದ ಶಿದ್ದಯ್ಯನು
ದೊಂಬರ ಚನ್ನಯ್ಯ ಭಾವಕ್ಕೆ ವಲಿದೋಗಿ। ಬೆನ್ನತ್ತಿ ತಿರುಗಿದ ಶಿದ್ದಯ್ಯನು
ಪಿಡ್ಡಪ್ಪನ ಮನೆಯಲ್ಲಿ। ದಡ್ಡ ಅಯ್ಯನಾಗಿ ದ್ವಾಸಿಯ ವುಂಡನಾ ಶಿದ್ದಯ್ಯನು.

# ‘ಜನಪದ ಗೀತೆಗಳಲ್ಲಿ ಮಕ್ಕಳು’’

—ಬಿ. ಸಿದ್ಧಗಂಗಯ್ಯ, ಕಂಬಾಳು.

ಜನಪದ—ಇದರ ಅನೇಕ ವರ್ಗೀಕೃತ ಬಗೆಗಳಲ್ಲಿ ಸಾಹಿತಿಕ ಬಗೆಯೂ ಒಂದು. ಈ ಬಗೆಯ ಒಂದು ಅಂಗವಾದ ಜನಪದ ಹಾಡು ಮಾನವನ ಸುಖ-ದುಃಖದ ಪ್ರತೀಕವಾಗಿ ಹುಟ್ಟಿದೆ. ನಾಗರೀಕರಲ್ಲದ ಜನಪದರ ಹೃದಯದಿಂದ ಬಂದುದೇ ಜನಪದ ಗೀತೆ. ಜನಪದರು ಕವಿಗಳಲ್ಲ ಅವರ ಹಾಡಿನಲ್ಲಿ ಕಾವ್ಯ ಸೌಂದರ್ಯಗಳಿದ್ದರೆ ಅದಕ್ಕೆ ಕಾರಣ ಅವರಲ್ಲ ಹಾಡಿನ ಸಂದರ್ಭವೇ ಅದಕ್ಕೆ ಕಾರಣ. ಸಂದರ್ಭದಲ್ಲಿ ಹುಟ್ಟಿ ಬದುಕಿನ ಅವಶ್ಯಕತೆಗೆ ಪ್ರಸರಣ ಹೊಂದುವಂತಿದ್ದು ಹಾಡುವಾಗಲೇ ಸೃಷ್ಟಿಯಾಗುವುದು ಹಾಡು. ಜೀವನ ಸೌಂದರ್ಯವನ್ನು ಉದ್ದಿಶ್ಯವಾಗಿ ನಿಂತು ಕಾಣುವ ಕಣ್ಣು ಜನಪದರಿಗಿಲ್ಲ. ಜೀವನದಲ್ಲಿ ಸೌಂದರ್ಯವೂ ಇದೆ ಎಂದು ಅವರು ತಿಳಿದವರು, ಬದುಕಿನ ವಿವಿಧ ಹಂತದ ವಿವರಗಳನ್ನೆಲ್ಲಾ ಹಾಡಿನಲ್ಲಿ ತೋಡಿಕೊಳ್ಳುವುದೇ ಅವರ ಜೀವನದ ಬಹುವಾದ ಉದ್ದಿಶ್ಯ. ಸೌಂದರ್ಯದಿಂದ ದೂರ ನಿಂತಾಗಲೀ ಸೌಂದರ್ಯದಲ್ಲೇ ಮುಳುಗುವುದಾಗಲೀ ಅವರಿಂದ ನಿರೀಕ್ಷಿಸಲೂಬಾರದು. ಬದುಕಿನಲ್ಲಿ ಸೌಂದರ್ಯ ಸಹಜವೆನ್ನುವಂತೆ ಹಾಡಿದ್ದಾರೆ.

ರಮ್ಯ ಸಂಪ್ರದಾಯದ ಈಚಿನ ಕವಿಗಳು, ವಿಮರ್ಶಕರು ಜನಪದ ಹಾಡುಗಳಲ್ಲಿರುವ ಕಾವ್ಯಗುಣಗಳನ್ನೂ ಸೌಂದರ್ಯವನ್ನೂ ಗುರುತಿಸಿ ‘ನೋಡಿದಿರಾ ಹೀಗಿದೆ’ ಎಂದು ಶಿಷ್ಟಕಾವ್ಯಗಳಿಗೆ ಹೋಲಿಸಿ ಮೆಚ್ಚಿದರು, ಸತ್ವವುಳ್ಳ ಕೇವಲ ಹಾಡುಗಳನ್ನು ಸಂಗ್ರಹಿಸಿ ಪ್ರಶಂಸೆಮಾಡಿ ತಲೆದೂಗಿದರು. ಆದರೆ ಜಾನಪದ ಬಹುವಿಸ್ತಾರವಾದ ಶಾಸ್ತ್ರವೆಂದೂ ಅದರಲ್ಲಿ ಸಾಹಿತ್ಯದ ಬಗೆ ಒಂದಂಶವೆಂದೂ, ಆ ಸಾಹಿತ್ಯದಲ್ಲಿ ಕಂಡುಬರುವ ಕಾವ್ಯಗುಣಗಳು ನಿರುದ್ದಿಶ್ಯವಾದುವೆಂದು ಅವರೂ ಒಪ್ಪಿದಾರೆ.

ಆರಿಸಿಕೊಂಡ ವಿಷಯದಿಂದಾಗಿ ನಾನೂ ಕೆಲ ನಿಮಿಷ ಒಬ್ಬ ಜಾನಪದ ವಿದ್ಯಾರ್ಥಿಯೆಂಬುದನ್ನು ಮರೆತು ಕೆಲವು ಜನಪದ ಗೀತೆಗಳಲ್ಲಿ ಕಂಡುಬರುವ ಮಕ್ಕಳ ವಿಷಯದ ಬಗ್ಗೆ ಪ್ರಶಂಸೆಯ ಟಿಪ್ಪಣಿಗಳನ್ನು ಮಾತ್ರ ಹೇಳಬಯಸುತ್ತೇನೆ. ಕಾರಣ ಇದು ಆರಿಸಿಕೊಂಡ ವಿಷಯದ ಸಂಪೂರ್ಣ ಅಧ್ಯಯನವಾಗುವುದಿಲ್ಲ. ಹಾಗೆ ಅಧ್ಯಯನ ಮಾಡಿದ್ದಾಗಿದ್ದರೆ ಜಾನಪದ ವೈಜ್ಞಾನಿಕ ಬಗೆಯಿಂದ ಪ್ರಾರಂಭಿಸಿ ಮಕ್ಕಳು ತಮ್ಮ ಆಟಪಾಠಗಳಲ್ಲಿ ಕಟ್ಟಬಹುದಾದ ಮಕ್ಕಳಾಟದ ಹಾಡುಗಳ ತನಕ ಹೇಳಬೇಕಾಗುತ್ತದೆ. ಆದರೆ ಈ ಲೇಖನದಲ್ಲಿ ಮಕ್ಕಳ ಬಗ್ಗೆ ಜನಪದ ಗೀತೆಗಳಲ್ಲಿ ಕಂಡುಬರುವ ಮಧುರ ಭಾವಗಳನ್ನು ಕುರಿತು ಹೇಳಲು ಮಾತ್ರ ನಾನು ಸೀಮಿತಗೊಳಿಸಿಕೊಳ್ಳುತ್ತೇನೆ.

ಜನಪದರ ಜೀವನ ಮೌಲ್ಯಗಳಿಗೂ ಸಾಮಾಜಿಕ ಮೌಲ್ಯ ಮತ್ತು ಪ್ರಜ್ಞೆಗಳಿಗೂ ನಿಕಟ ಸಂಬಂಧವಿರುತ್ತದೆ, ವ್ಯಕ್ತಿಯ ಹಂಬಲ ಸಮಾಜದ ಆಕಾಂಕ್ಷೆಯಾಗಿರುತ್ತದೆ. ಬಹುಷಃ ಇದರಿಂದಲೇ ಇರಬೇಕು. ಮಕ್ಕಳಿಲ್ಲದ ಗರತಿಯರನ್ನು ಅಸಡ್ಡೆ ಮಾಡಿದಂತಿರುವ ಹಾಡುಗಳು ನಮಗೆ ಸಿಕ್ಕುವುದು,

ಬಾಲಾ ನಿಲ್ಲದ ಬಾಲೇದ್ಯಾತರ ಜನ್ಮ
ಬಾಡೀಗೆ ಎತ್ತು ದುಡಿದಂಗ । ಬಾಳೆಲೆಯ
ಹಾಸುಂಡು ಬೀಸಿ ಒಗೆದಂಗ.

ಮಕ್ಕಳಿದ ಗರತಿಯ ಬಾಳು ನಿರರ್ಥಕ ಎಂಬ ಭಾವನೆ ಬರುವುದಕ್ಕೆ ಕಾರಣವನ್ನು ಹುಡುಕಿದರೆ ಸಿಕ್ಕುವ ಪರಿಹಾರ ಈ ಪದ್ಯದ ಭಾವ.

ಕಂದನ ಕೊಡು ಶಿವನೆ ಬಂಧನ ಪಡಲಾರೆ
ಹಂಗೀನ ಬಾನ ಉಣಲಾರೆ । ಜಗದಾಗೆ
ಬಂಜೆಂಬ ಶಬುದ ಹೊರಲಾರೆ.

ಈ ಪದ್ಯವನ್ನು ಶಿಷ್ಟ ಸಾಹಿತ್ಯಕ್ಕೆ ಹೋಲಿಸಿದರೆ, ಶಿಷ್ಟ ಸಾಹಿತ್ಯದಲ್ಲಿ “ಅಪುತ್ರಸ್ಯ ಗತಿರ್ನಾಸ್ತಿ” ಮಕ್ಕಳಿಲ್ಲದಿದ್ದರೆ ‘ಪುತ್’ ಎಂಬ ಘೋರ ನರಕ ಬರುತ್ತದೆ, ಕಂಡರಿಯದ ಸ್ವರ್ಗ ಪದವಿ ಲಾಲಸೆ ಅವರಿಗಾದರೆ, ಜನಪದರಿಗೆ ಇವುಗಳ ಆಲೋಚನೆಯೇ ಇಲ್ಲ ತೀರಾ ಸಹಜವಾದ ಕಾರಣ ‘ಜಗದಲ್ಲಿ ಹಂಗಿನ ಬಾನ ಉಣಲಾರೆ’

ಎಂಬ ವೇದನೆಯ ಅಂತರ್ವಾಣಿ ನಿಜಕ್ಕೂ ಸಹಜ ವೆನಿಸುತ್ತದೆ ಜೀವನವನ್ನು ಅಲಂಕರಿಸಿಕೊಳ್ಳುವಿಕೆ ಇಲ್ಲಿ ಕಾಣುವುದಿಲ್ಲ.

ಗರತಿ ಮಕ್ಕಳಿಗಾಗಿ ಹಂಬಲಿಸುವ ಕೆಲವು ಹಾಡುಗಳಲ್ಲಿ ಹತಾಷೆಯ ತೀವ್ರತೆಯನ್ನು ಕಾಣುತ್ತೇವೆ.

ಆಡೋಮಕ್ಕಳಕಂಡು ಕಾಡಿತ್ತು ನನಜೀವ
ಮಾಡಿದ್ದಾನೇನ ಶಿವರಾಯ । ಮಗನೊಬ್ಬ
ಕೂಡಿದ್ದಾನೇನ ಬಸಿರೊಳಗೆ ।

ಉದ್ವೇಗ, ಸಂಶಯ ಆಕೆಯನ್ನು ಕಾಡಿ ಹಾಡಾಗಿ ಹೊಮ್ಮಿದ ಈ ಪದ್ಯದಲ್ಲಿ ಮಕ್ಕಳಾಟದ ಸೊಬಗಿನ ಮಿಂಚು ಮಿಂಚಿ ಹರಿದಿದೆ. ಮಕ್ಕಳನ್ನು ಹಡೆಯಬೇಕೆಂಬ ಆಸೆ, ಆಕಾಂಕ್ಷೆಗಳು ಕಾತುರವಾಗಿ, ಕಾತುರ ಹತಾಶೆಯ ಮಟ್ಟಕ್ಕೂ ಹೋಗಿಬಿಡುತ್ತದೆ. ಆಕೆ ದೇವರನ್ನು ಬೇಡುತ್ತಾಳೆ " ಸಂಜಗೆ ಕೊಟ್ಟು ನೀ ಮುಂಜಾನೆ ಕೊಳ್ಳಯ್ಯ ಬಂಜೆಂಬ ಸಬುದ ಬಿಡಿಸಯ್ಯ," ಜನಪದ ಗರತಿ ಬೇಡುವ ರೀತಿಯನ್ನು ನೋಡಿದರೆ ಸಮಾಜದ ಸಮುಷ್ಟಿ ಪ್ರಜ್ಞೆ ಹೇಗೆ ವ್ಯಕ್ತಿಯ ಹಂಬಲವಾಗಿದೆ ಎಂಬುದನ್ನು ಗಮನಿಸಬಹುದು.

ಗರತಿಯೊಬ್ಬಳು ಚೊಚ್ಚಿಲ ಕೂಸೊಂದಕ್ಕೆ ಜನ್ಮನೀಡಲು ಸಿದ್ಧವಾದಾಗ ತಾನು ಗರ್ಭಿಣಿಯಾಗಿದ್ದೇನೆ ಎಂಬ ಆನಂದ ಪ್ರಚೋದಕ ಸುದ್ದಿಯನ್ನು ಮೊಟ್ಟ ಮೊದಲಬಾರಿಗೆ ತನ್ನ ಗಂಡನ ಹತ್ತಿರ ಹೇಳುವ ರೀತಿ ಇಲ್ಲೊಂದು ಪದ್ಯದಲ್ಲಿ ಚಮತ್ಕಾರವಾಗಿ ಬಂದಿದೆ.

ನಿನಮುಂದೆ ಮಾತೊಂದ ಬಿಚ್ಚಿ ಮುಚ್ಚಿ ಹೇಳತೇನು
ಬಸಿರಿದ್ದೀನ್ಹೆಸರಾ ನೇನಿಡೋನ ।

ಆಕೆ ಗರ್ಭಿಣಿಯಾಗಿರುವುದು ಮುಖ್ಯವಲ್ಲ ಹುಟ್ಟುವ ಮಗುವಿಗೆ ಹೆಸರನ್ನು ಯಾವುದಿಡಬೇಕೆಂಬ ಪ್ರಶ್ನೆ ಮುಖ್ಯವಾಗಿದ್ದಂತೆ ಒತ್ತು ಕೊಡುವ ಚಮತ್ಕಾರ ಉತ್ತಮವಾಗಿದೆ. ಮಗುವನ್ನು ಪಡೆದ ಗರತಿ ಜನ್ಮ ಸಾರ್ಥಕ್ಯವನ್ನು ಪಡೆಯುತ್ತಾಳೆ ಎಂಬ ಸಾಮಾಜಿಕ ಮೌಲ್ಯ ಜನಪದ ಗೀತೆಗಳಲ್ಲಿ ಕಂಡುಬರುತ್ತದೆ. "ಬಿದಿರಿನ ತೊಟ್ಟಿಲೊಳಗೊಂದ ತೂಳಿದ ಮುತ್ತನು ಕಂಡೆ" ಎಂದು ಹಾಡಿದಾಗ ತಾಯಿಯ ಜೊತೆಯಲ್ಲಿಯೇ ಬಿದರಿನ ತೊಟ್ಟಿಲೂ ಸಾರ್ಥಕವಾಗಿಬಿಡುತ್ತದೆ. ತೊಟ್ಟಿಲಿನಲ್ಲಿ ಮಲಗಿ ಅಳುವ ಮಗುವನ್ನು ಕಂಡು ಹಾಡಿರಬಹುದಾ[illegible] ಈ ಗೀತೆ ಸೌಂದರ್ಯ ಸಮೀಕ್ಷಕರನ್ನು ವಿಸ್ಮಯಗೊಳಿಸಿಬಿಟ್ಟಿದೆ.

ಅಳುವ ಕಂದನ ತುಟಿಯು ಹವಳದ ಕುಡಿ ಹಂಗ
ಕುಡಿಹುಬ್ಬು ಬೇವಿನ್ಹೆಸಳಂಗ । ಕಣ್ಣೋಟ
ಶಿವನ ಕಯ್ಯಲಗು ಹೊಳೆದಂಗ.

ಈ ಗರತಿ ಕಂಡಿರುವುದು ಅಳುವ ಕಂದನನ್ನು ಈ ಮಾತನ್ನು ಗಮನಿಸಬೇಕು.

ಕಿಲಕಿಲನೆ ನಗುವ ಕಂದನ್ನನ್ನು ನೋಡಿ ಹೇಳಿಕೊಳ್ಳಲಾಗದ ಆನಂದದ ಅಂತಃಸ್ಥಿತಿಯ ಸೋಲು ಅಳುವ ಕಂದನನ್ನು ನೋಡಿ ಹಾಡಿ ತೃಪ್ತಿಗೊಂಡಿದೆ. ಮಗುವಿನ ತುಟಿಗಳನ್ನು ಹವಳದ ಕುಡಿಗೂ ಹುಬ್ಬನ್ನು ಬೇವಿನ ಚಿಗುರಿಗೂ, ಕಣ್ಣನೋಟವನ್ನು ಶಿವನ ತ್ರಿಶೂಲದ ಹೊಳಪಿಗೂ ಹೋಲಿಸಿ ಅಸಂಗತ್ವದ ಭಾವತೀವ್ರತೆಯನ್ನು ಅನುಭವಿಸಿದ್ದಾಳೆ. A Thing of beauty is Joy for ever, beauty is truth, truth is beauty. ಮುಂತಾದ ನುಡಿಗಳು ನಮಗೆ ನೆನಪಾಗಿಬಿಡುತ್ತವೆ.

ಜನಪದ ಸಾಹಿತ್ಯದಲ್ಲಿ ದೊರೆಯುವ ಜೋಗುಳದ ಹಾಡುಗಳಂತೂ ಮೃದುಮಧುರ ಭಾವಗಳನ್ನು ತಾವು ದಿನನಿತ್ಯದಲ್ಲಿ ಅನುಭವಿಸುವ ಅಮೂಲ್ಯ ವಸ್ತು ಪರಿಕರಗಳಿಗೆ ಹೋಲಿಸಿ ಲಾಲಿಹಾಡಿದಂತಿದೆ.

ಆಡಿ ಬಾ ನನಕಂದ ಅಂಗಾಲ ತೊಳೆದೇನು
ತೆಂಗೀನಕಾಯಿ ಎಳನೀರು। ತಕ್ಕೊಂಡು
ಬಂಗಾರದ ಪಾದ ತೊಳೆದೇನು।

ತನ್ನ ಕಂದನ ಬಂಗಾರದ ಪಾದಗಳು ಆಡಿ ಕೊಳೆಯಾದಾಗ ತಾನು ತೊಳೆಯಲು ಉಪಯೋಗಿಸುವ ನೀರಿನ ಅಮೂಲ್ಯತೆ, ಮಧುರತ್ವಗಳು ಎಷ್ಟಾದರೂ ಕಡಿಮೆಯೇ. ಆದಕ್ಕಾಗಿ ಆಕೆ ಎಳನೀರನ್ನು ಆಯ್ಕೆಮಾಡಿಕೊಂಡಳು, ತಾಯಿಯ ಮಮತೆ ಇಲ್ಲಿ ಹೇಗೆ ಆಡಿಕೊಂಡಿದೆ ಎಂಬುದನ್ನು ನಾವು ಗಮನಿಸಬೇಕು.

ಕೂಸು ಇದ್ದ ಮನಿಗೆ ಬೀಸಣಿಗೆ ಯಾತಕ
ಕೂಸು ಕಂದಯ್ಯ ಹೊರ ಒಳಗೆ। ಆಡಿದರೆ
ಬೀಸಣಿಗೆ ಗಾಳಿ ಸುಳಿದಾವ।

ಬದುಕಿನ ಬೇಗುದಿಯ ಉರಿಬೇಸಗೆಯ ಸೆಕೆಯನ್ನು ನಿವಾರಿಸಿಕೊಳ್ಳುವ ತೃಪ್ತಿ ಈ ಹಾಡಿನಲ್ಲಿ ಚನ್ನಾಗಿ ಬಂದಿದೆ. ಜೀವನದಲ್ಲಿ ತೃಪ್ತಿ ಪ್ರಾಪ್ತಿಯಾಗುವುದು ಐಶ್ವರ್ಯದಿಂದಲ್ಲ ಸುಖಭೋಗದಿಂದಲ್ಲ; ಮಗು ಮನೆಯಲ್ಲಿ ಅಂಬೆಗಾಲಿಕ್ಕುತ್ತ ಒಳಹೊರಗೆ ಆಡುವುದನ್ನು ನೋಡುವುದೇ ಭಾಗ್ಯ, ಭೋಗ. ಮಕ್ಕಳಾಟವನ್ನು ಗಮನಿಸಿರುವ ಎಲ್ಲ ತಂದೆ ತಾಯಿಗಳೂ ಈ ಮಾತನ್ನು ಒಪ್ಪುತ್ತಾರೆಂದು ನನ್ನ ಭಾವನೆ.

ಮಕ್ಕಳು ಚಂಡಿ ಹಿಡಿದು ಅಳಲು ಮೊದಲು ಮಾಡಿದಾಗ ಅದನ್ನು ಸುಧಾರಿಸುವ ತಾಯ್ತನಕ್ಕೆ ತಾಳ್ಮೆ ಎಂದು ಹೆಸರಿಡಬಹುದೇನೋ ಆಲೋಚಿಸಬೇಕು. ಒಂದೇಸಮನೆ ಆಲಾಪ ಮಾಡಿ ಏನು ಮಾಡಿದರೂ ಸುಮ್ಮನಾಗದ ಮಗುವನ್ನು ಕಂಡ ತಾಯಂದಿರಾಗದ ಕೆಲವರು ಅಥವಾ ಗರತಿಯ ಗೆಳತಿಯರೋ ಇದೇನಿಂಥ ಮಗು ಒಂದೇಸಮ ಅಳುತ್ತದೆ ಆಡೋದೇ, ಇಲ್ಲ ಎಂದು ಬೇಸರಿಸಿದಾಗ ನಿಜವಾದ ತಾಯಿ ತನ್ನ ಮಗುವನ್ನು ಅಪ್ಪಿ ಮುದ್ದಾಡಿ

ಅತ್ತರೇ ಅಳಲವ್ವ ಈ ಕೂಸು ನನಗಿರಲಿ
ಕೆಟ್ಟರೇ ಕೆಡಲಿ ಮನೆಗೆಲಸ । ಮಗನಂಥ
ಮಕ್ಕಳಿರಲವ್ವ ಮನೆತುಂಬ ॥

ಮಕ್ಕಳ ಮೇಲಿಟ್ಟಿರುವ ಆಸೆ ತಾಯಿಯೊಬ್ಬಳದೇ ಅಲ್ಲ ಇದು ಸಮಾಜದ ಹಂಬಲವೂ ಹೌದು.
ತಾಯ ಮುಂದೆ ಮಕ್ಕಳು ತುಂಟಾಟ ಮಾಡಬೇಕು, ಆಡಬೇಕು ಒಟ್ಟಿನಲ್ಲಿ ಸುಮ್ಮನಿರುವುದನ್ನು ತಾಯಿ ಬಯಸಲಾರಳು. ತನ್ನ ಸಂಗಾತಿಗಳ ಕೂಡೆ ಮನೆಗೆ ಬಂದ ಪತಿಯ ಮುಂದೆ ಮಗನ ತುಂಟಾಟಗಳನ್ನು ಹೇಳಿಕೊಂಡಳೇ ತೃಪ್ತಿ. ಮಗು ಹಾಲುಬೇಡಿ ಅತ್ತದ್ದು ಮೊಸರು ಬೇಡಿ ಕೆಸರು ತುಳಿದಂತೆ ಕುಣಿದಾಡಿದ್ದು ಇವೆಲ್ಲಾ ಸುಖ್ಯವೇ.

ಇಲ್ಲೊಬ್ಬ ಜನಪದಕವಿ ತಾಯಮಡಿಲಲ್ಲಿ ಆಡುವ ಮಕ್ಕಳನ್ನು ಕುರಿತು ಹಾಡಿರುವ ಪದ್ಯವನ್ನು ನೋಡಿ

ಬೆಳ್ಳನೆಬೆಳಕಾಗಿ ಬೆಳ್ಳಿ ಮೂಡಲವಾಗಿ
ಒಳ್ಳೊಳ್ಳೆ ಮೀನು ಗರಿಗೆದರಿ। ಹಾಡ್ಯಾನ
ಗರತಿ ಗಂಗಮ್ಮನ ಉಡಿಯಾಗೆ ॥

ಈ ಪದ್ಯದಲ್ಲಿ ಕಂಡುಬರುವುದು ಬರಿಯ ನಿಶಾವಸಾನವಲ್ಲ, ಪ್ರಶಾಂತವಾದ ಮುಂಬೆಳಗು ಬೆಳ್ಳಿ ಮೂಡಲದಿಕ್ಕಿನಲ್ಲಿ ಮೂಡಿದೆ. ನಸುಗೆಂಪು ತುಂಬಿ ತುಳುಕುತ್ತಿದೆ. ಇಂಥ ನೀರವತೆಯಲ್ಲಿ ತಿಳಿಯಾದ ಕೊಳವೊಂದರಲ್ಲಿ ಒಳ್ಳೊಳ್ಳೆ ಮೀನು ಗರಿಗೆದರಿ ಸ್ವಚ್ಛಂದವಾಗಿ ಆಡುತ್ತವೆ. ಮೀನುಗಳಿಗೆ ನೀರನ್ನು ಬಿಟ್ಟು ಇರುವುದು ಹೇಗೆ ಅಸಾಧ್ಯವೋ ಅಸಾಧುವೋ ಹಾಗ ಗರತಿ ತಾಯಿಯ ಮಡಿಲಲ್ಲಿ ಆಡುವ ಎಳೆಯ ಮಕ್ಕಳು. ಈ ಜನಪದ ಸಮಾಜದಲ್ಲಿ ಮಕ್ಕಳಿಂದಾಗಿಯೇ ತಾಯಿಗೆ ಪೂಜ್ಯತೆ ಬಂದಂತೆ ಭಾಸವಾಗುತ್ತದೆ. ಈ ಕವಿ ಮಕ್ಕಳನ್ನು ಕುರಿತು ಹೇಳಲು ಉಪಯೋಗಿಸಿಕೊಂಡಿರುವ ರೂಪಕ ಉತ್ಕೃಷ್ಟವಾದುದು.

ಮಕ್ಕಳ ಏಳಿಗೆಯನ್ನು ಶಿಷ್ಟಕವಿಗಳು ವೃದ್ಧಿ ಚಂದ್ರನಿಗೆ ಹೋಲಿಸಿದರೆ, ಜನಪದ ಗರತಿಯೊಬ್ಬಳು ತನ್ನ ಮಗನು ತೊದಲಾಡಿ ಓದುವ ದನಿಯನ್ನು ಕೇಳಿ ಉದ್ವೇಗಗೊಂಡು ಹಾಡಿಗೊಂಡಿರುವ ಈ ಪದ್ಯದಲ್ಲಿ ಸಹಜತೆಯನ್ನು ನೋಡಿ

ಹಾದಿಚಂದಂಗಡಿ ಬೀದಿಚಂದ ಬೆಂಗಳೂರು
ಸಾಲಂಗಡಿ ಚಂದ ಶಿವಗಂಗೆ । ಮಠದಾಗೆ
ಓದೋ ಕಂದಯ್ಯ ದನಿ ಚಂದ।
ಕಣ್ಣು ಕಪ್ಪಿನ ಜಾಣ ಮೆಲ್ಲಗೆ ಮಾತಾಡೋ
ಅಲ್ಲ ದೋರವರೆ ನೆರಯಾಗೆ । ಕಂದಯ್ಯ
ಒಳಬಾರೋ ದಿಟ್ಟಿ ತೆಗೆದೇನು ।

ತನ್ನ ಮಗನ ಅಂದಚಂದಗಳನ್ನು ಅಲ್ಲದವರು ನೋಡಿದರೆ ಮಗುವಿಗೆಲ್ಲಿ ದಿಟ್ಟಿಯಾಗಿ ಬಿಡುತ್ತದೋ ಎಂಬ ಸಂಕುಚಿತ ಮನೋಭಾವವೇ ಇಲ್ಲಿ ವಾತ್ಸಲ್ಯವಾಗಿರುವುದನ್ನು ಗಮನಿಸಬೇಕು. ದಿಟ್ಟಿ ನಿವಾಳಿಸಿ ತೆಗೆಯುವುದು, ಪೊರಕೆ ಕಡ್ಡಿಗಳನ್ನು ಸುಡುವುದು, ಸುಟ್ಟಬೂದಿಯನ್ನು ಹಣೆಗಿಡುವುದು, ಹಿಗ್ಗುವುದು ತಾಯ್ತನದ ನಿಗೂಢ ತೃಪ್ತಿಯ ಅಭಿವ್ಯಕ್ತಿ. ಜನಪದದಲ್ಲಿ ಈ ರೀತಿ ಹಾಡಾಗಿ ಬಂದುದು ಸಹಜವಾಗಿಯೇ ಇದೆ.

'ಪೂಜಿಸಿದರೆ ದೇವರು ಪಾಲಿಸಿದರೆ ಮಕ್ಕಳು', ಎಂಬ ಗಾದೆಯೊಂದಿದೆ ಮಕ್ಕಳ ಪಾಲನೆಗಿಂತ ಶ್ರೇಷ್ಠ ಕಾರ್ಯ ಮಹಿಳೆಯರಿಗೆ ಇನ್ನೊಂದಿರಲಾರದು, ಜನಪದ

ಕಥನ ಗೀತೆಯೊಂದರಲ್ಲಿ "ಶಿವಗಂಗೆ ಗಂಗಾಧರೇಶ್ವರನು ಭಿಕ್ಷೆಗೆಂದು ಊರಾಡುತ್ತಿರುವಾಗ ಹೊನ್ನಾದೇವಿಯೆಂಬ ಗಂಡುಳ್ಳ ಗರತಿಯನ್ನು ನೋಡಿ ಅನುರಕ್ತನಾಗುತ್ತಾನೆ. ಆಕೆಗೊಂದು ಗಂಡು ಮಗುವಿರುತ್ತವೆ. ಗಂಗಾಧರೇಶ್ವರ ಹೊನ್ನಾದೇವಿಯನ್ನು ಹಾರಿಸಿಕೊಂಡು ಶಿವಗಂಗೆಗೆ ಬಂದು ಬಿಡಬೇಕು, ಹೊನ್ನಾದೇವಿಯೂ ಇದಕ್ಕೆ ಸಮ್ಮತಿಸಿಬಿಟ್ಟಿದ್ದಾಳೆ. ಇನ್ನೇನು ಹೊರಡಬೇಕು ಆಗ ಹೊನ್ನಾದೇವಿ ಮಗನನ್ನು ಎತ್ತಿಕೊಂಡು ಹೊರಡುತ್ತಾಳೆ. ಗಂಗಾಧರೇಶ್ವರನಿಗೆ ಇದು ಸಮ್ಮತವಿಲ್ಲ ನೀನೊಬ್ಬಳೇ ಬಾ ಎನ್ನುತ್ತಾನೆ. ಆಗ ಹೊನ್ನಾದೇವಿ ದೇವತೆಯಾದರೂ ತಾಯಿಯಾಗಿ ಹೇಳುವ ಮಾತು ಅಪ್ರತಿಮವಾಗಿದೆ.

ಹಾಲೈತೆ ಒಲೆಮ್ಯಾಲೆ ಬಾಲೈತೆ ತೊಡೆಮ್ಯೇಲೆ
ಬಿಟ್ಟೆಂಗೆ ಬರಲೋ ಸ್ವಾಮಿ । ಗಂಗಾಧರೇಶ
ಬಿಟ್ಟೆಂಗೆ ಬರಲೋ ಸ್ವಾಮಿ.।

ಪ್ರಿಯಕರನ ಪ್ರೇಮದಾಲಿಂಗನಕ್ಕಿಂತಲೂ ಮಗುವಿನ ಮೇಲಿನ ವಾತ್ಸಲ್ಯದ ಎಳೆ ಪಟುತರವೆಂಬುದಕ್ಕೆ ಇಂಥ ಉದಾಹರಣೆಗಳು ಸಿಕ್ಕುತ್ತವೆ; ಹೊನ್ನಾದೇವಿ ನಿಜವಾದ ತಾಯಿಯಾಗಿ ಕಂಡು ಬರುತ್ತಾಳೆ. ಪಾಲನೆ ಪೋಷಣೆಯ ಕರ್ತವ್ಯದ ಮುಂದೆ ಉಳಿದ ವ್ಯಾಮೋಹಗಳು ಬಿದ್ದು ಹೋಗುತ್ತವೆ.

ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳಾದ ಜನಪದರು ಮಕ್ಕಳ ಲಾಲನೆ ಪಾಲನೆಗಳನ್ನು ವಿವರವಾಗಿ ಹಾಡಿಕೊಂಡಿದ್ದಾರೆ. ಉತ್ತಮವಾದ ಮಕ್ಕಳು ಸತ್ ಸಮಾಜದ ಕೊಡುಗೆ ಎಂಬ ಮಾತು ನಿಜವಾಗಬೇಕಾದರೆ, ಮಕ್ಕಳಿಗೆ ತಾಯಿ ಲಾಲಿಸುವಾಗ, ಪಾಲಿಸುವಾಗ ಹಾಲು ಬೆಣ್ಣೆಗಳ ಜೊತೆಯಲ್ಲಿ ಸನ್ಮಾರ್ಗವನ್ನು ಮಗುವಿಗೆ ಊಡಿಸಿ ಕೂಡಿಸಬೇಕು. ಈ ದಿಶೆಯಲ್ಲಿ ತಾಯಿಯ ಜವಾಬ್ದಾರಿ ಮಹತ್ತರವಾದುದು.

ಜನಪದ ಗೀತೆಗಳಲ್ಲಿ ಮಕ್ಕಳಿಗೆ ಹೇಳಲಾಗಿರುವ ನೀತಿಯ ಮಾತುಗಳು ವಿಪುಲವಾಗಿ ಸಿಕ್ಕುತ್ತವೆ. ನಿರಕ್ಷರ ಕುಕ್ಷಿಯಾದ ಈ ಗರತಿ ತನ್ನ ಬಡಕುಟೀರದ ಸೂರಿಗೆ ತೊಟ್ಟಿಲನ್ನು ಕಟ್ಟಿ ಮಗನನ್ನು ಮಲಗಿಸಿ, ತನ್ನ ಮಗ ಮುಂದಿನ ಜೀವನದಲ್ಲಿ ಹೇಗಿರಬೇಕೆಂದು ಹಾರೈಸಿ, ಬಯಸಿ, ಆ ಬಯಕೆಯ ಮಾರ್ದವತೆಯಲ್ಲಿ ಹಾಡಿಕೊಂಡಿರುವ ಈ ಹಾಡು ಜಗತ್ತಿನ ತಾಯಿ ಮಕ್ಕಳಿಗೆ ಹಾಡಿ ಎರೆದ ನೀತಿಯ ನವನೀತವೆನಿಸಿದೆ.

ಆಚಾರಕರಸಾಗುನೀತಿಗೆ ಪ್ರಭುವಾಗು
ಮಾತಿನಲಿ ಚೂಡಾಮಣಿಯಾಗು । ನನಕಂದ
ಜ್ಯೋತಿಯೆ ನೀನಾಗು ಜಗಕೆಲ್ಲ.

ತಾಯಿ ತನ್ನ ಮಗನಿಂದ ನಿರೀಕ್ಷಿಸುವ ಈ ಸಜ್ಜನತ್ವವನ್ನು ಗಮನಿಸಿದರೆ ಅನಾಗರೀಕ ಹೆಣ್ಣೊಬ್ಬಳ ಹೃದಯದಿಂದ ಬಂದುದು ಎಂದು ಹೇಳುವಂತಿಲ್ಲ. ತನ್ನ ಮಗು ರಾಜ್ಯದ ದೊರೆತನಮಾಡುವುದಕ್ಕಿಂತ ಸದಾಚಾರವೆಂಬ ಸಾಮ್ರಾಜ್ಯಕ್ಕೆ ರಾಜನಾಗಿ ಆಚಾರವಂತಿಕೆಯಿಂದಿದ್ದರೆ ಅದೇ ರಾಜಪದವಿ, ನೀತಿಗೆ ಪ್ರಭುವಾಗಿ, ಆಡಿದ ಮಾತು ಚೂಡಾಮಣಿಯಂತಿರಬೇಕು. ಜಗತ್ತಿಗೆ ಜ್ಞಾನದ ಬೆಳಕನ್ನು ಸಜ್ಜನಿಕೆಯ ಪ್ರಭೆಯನ್ನು ಬೀರುತ್ತಿರಬೇಕು.

ನಮ್ಮ ರಾಷ್ಟ್ರೀಯ ಮಕ್ಕಳ ಅಭಿವೃದ್ಧಿಯಲ್ಲಿ ಜನಪದ ತಾಯಂದಿರು ನೀಡುವ ಜೋಗುಳದ ಕಾಣಿಕೆ ಇದಾಗಲಿ ಎಂದು ಹಾರೈಸೋಣ. ●

---

## ಶ್ರೀ ಸಿದ್ಧಗಂಗಾ ಕ್ಷೇತ್ರ.

ಶ್ರೀ ಕ್ಷೇತ್ರವಿಹುದಿಲ್ಲಿ.
ತುಮಕೂರ ಹೆದ್ದಾರಿಯಲಿ
ನೋಡಿದವರ ಕಣ್ಮನ ತಣಿಯುವಂದದಲಿ ॥

ಚಿತ್ರವಾಗಿಹುದಿಲ್ಲಿ.
ಉನ್ನತದ ಶಿಖರದಲಿ
"ಕಾಯಕವೇ ಕೈಲಾಸ" ವೆಂಬ ಉಕ್ತಿ

ತೋರಿಕೆಯ ಮಾತಲ್ಲ.
ಕಾಯಕದಿ ಮೂಡಿಹುದು
ನೋಡಬನ್ನಿ ।

—ಶಿವರುದ್ರಯ್ಯ. ಎನ್.

ದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ, ತಾಮಾಡುವ ಸೇವೆ ನಷ್ಟವಯ್ಯ ? ಎಂಬ ನುಡಿಗಳಲ್ಲಿ ಪ್ರತಿಪಾದಿತವಾದ ತತ್ವ ಕಾಯಕಕ್ಕೆ ತಕ್ಕಷ್ಟೇ ಕೂಲಿ ಸ್ವೀಕರಿಸಬೇಕೆಂಬುದು ಅನುಕರಣೀಯ. ಮತ್ತು ಇದರಿಂದ ಲಂಚಗಳೆಲ್ಲಾ ತಾವಾಗಿ ನಿಲುತ್ತವೆ, ಭ್ರಷ್ಟಾಚಾರಕ್ಕೆಡೆಯಿಲ್ಲ.

ಕಾಯಕವೆಂದರೆ ಕಾಯವಿರುವವರು ಮಾಡಲೇಬೇಕಾದ ಕರ್ಮ ಅಥವಾ ಅವಶ್ಯ ಕರ್ತವ್ಯ. ಜೀವನೋಪಾಯಕ್ಕೆ ಕಾಯಕ ಮಾಡಲೇಬೇಕು. "ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತ". ಯಾವುದೇ ವೃತ್ತಿಯಾಗಲೀ ಎಲ್ಲವೂ ಗೌರವಯುತವಾದದ್ದೆ. ಅವುಗಳಲ್ಲಿ ಹೆಚ್ಚುಕಡಿಮೆ, ಮೇಲು ಕೀಳು ಭಾವನೆ ಹೊಂದಿರಬಾರದು. ವೃತ್ತಿಯಿಂದ ಜಾತಿ ಮತಗಳ ಸೃಷ್ಟಿಸಿಕೊಳ್ಳಬಾರದೆಂದು ಶರಣರ ಆರ್ಥಿಕ ಚಿಂತನೆಯ ಮತ್ತೊಂದು ನಿಯಮ. ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ, ಹಾಸನಿಕ್ಕಿಸಾಲಿಗನಾದ, ವೇದವನೋದಿ ಹಾರುವನಾದ ಆದ್ದರಿಂದ ವೃತ್ತಿಗಳಿಂದ ಜಾತಿಯನ್ನು ಗುರುತಿಸಬಾರದು. ಎಲ್ಲಾ ವೃತ್ತಿ ಮಾಡುವವರೂ ಸಮಾನರು. ಎಲ್ಲಾ ವೃತ್ತಿಗಳೂ ಪವಿತ್ರವಾದ ವೃತ್ತಿಗಳೇ ಎಂಬ ಚಿಂತನೆಮಾಡಿ ವೃತ್ತಿ ಗೌರವವನ್ನು ಪ್ರತಿಪಾದಿಸಿದರು. ಇಂದು ನಮ್ಮ ಯುವಕ ವಿದ್ಯಾವಂತರಲ್ಲಿ ಈ ವೃತ್ತಿಗೌರವಭಾವ ಮೂಡಿಬಂದರೆ ನಿರುದ್ಯೋಗ ಸಮಸ್ಯೆಯನ್ನೇ ಪರಿಹರಿಸಬಹುದು.

ನಮ್ಮರಾಷ್ಟ್ರದ ಉತ್ಪನ್ನಗಳಾದ ದವಸ ಧಾನ್ಯವನ್ನು ಹಿತ-ಮಿತವಾಗಿ ಉಪಯೋಗಿಸಿ ಕೊಳ್ಳಬೇಕು. ಶರಣರು ಅನ್ನವನ್ನು 'ಪ್ರಸಾದ' ಎಂದರು. ಒಂದು ಕಣವೂ ವ್ಯರ್ಥವಾಗಬಾರದೆಂಬುದು ಇದರ ಅಂತರಾರ್ಥ, ಎಲ್ಲವೂ ಸದ್ವಿನಿಯೋಗವಾಗಬೇಕು. ಅಯ್ದಕ್ಕಿಮಾರಯ್ಯನ ಕಾಯಕ ವ್ರತವನ್ನಿಂದು ನಾವು ಪರಿಪಾಲಿಸಿದರೆ ನಮ್ಮ ಉತ್ಪನ್ನದಲ್ಲಿ ಸಾಗಾಣಿಕೆ ಮೊದಲಾದೆಡೆಗಳಲ್ಲಿ ವ್ಯರ್ಥವಾಗಿ ಹಾಳಾಗುವ ಗಣನೀಯ ಪ್ರಮಾಣದ ದವಸವನ್ನು ಉಳಿಸಿಕೊಳ್ಳಬಹುದು. ದುರಾಶೆಗಳನ್ನು ನಿವಾರಿಸಬಹುದು. ಅತಿಯಾದ ಸಂಗ್ರಹವನ್ನು ತಡೆಯಬಹುದು. ಕಾಳಿನ ರಾಶಿಗೆ ಕಲ್ಲು ಮಣ್ಣುಗಳನ್ನು ಬೆರೆಸಿ ಮಾರುವ ರಾಕ್ಷಸೀ ಪ್ರವೃತ್ತಿಯನ್ನು ಅಳಿಸಿಹಾಕಲೂ ಬಹುದು.

'ಶರಣರ ಕಾಯಕವೇ ಕೈಲಾಸವೆನ್ನುವ' ತತ್ವದ ಹಿಂಬದಿಯಲ್ಲಿರುವ ಆರ್ಥಿಕ ತತ್ವಗಳು, ಸಮಾಜವಾದದ ಸಮತಾವಾದದ ತತ್ವಗಳೇ ಇಂದಿಗೆಂಬ ನಾಳೆಗೆಂಬ ಚಿಂತೆ ಎಮಗೇಕೆ, ತಂದಿಕ್ಕುವ ಶಿವನಿಗೆ ಬಡತನವೇಕೆ ? ಎನ್ನುವ ಉಕ್ತಿಯಲ್ಲಿ ಯಾವುದನ್ನೇ ಆಗಲಿ ಅತಿಯಾಗಿ ಸಂಗ್ರಹಿಸಿಟ್ಟುಕೊಳ್ಳಬಾರದೆನ್ನುವುದೇ ಶರಣರ ಭಾವನೆ. ಇದರ ಅನುಷ್ಠಾನ ದಿಂದ ಕಾಳಸಂತೆಯೂ, ಭ್ರಷ್ಟಾಚಾರವೂ ಇಲ್ಲ. ಲಂಚ ಗುಳಿತನಕ್ಕೆಡೆಯಿಲ್ಲ. ಈ ಕಾಯಕತತ್ವದಲ್ಲಿ ಮೇಲು ಕೀಳು ಎನ್ನುವ ಪರಿವೆಯೇ ಬರುವುದಿಲ್ಲ. ಎಲ್ಲರೂ ಒಂದೆ ಎಲ್ಲ ಕಾಯಕವೂ ಒಂದೆ. ಎನ್ನುವ ಭಾವನೆ ಮೂಡಿ ಸಮಾಜದಲ್ಲಿ ಇಂದು ನಾವು ಕಾಣುತ್ತಿರುವ ಸಮಸ್ಯೆಗಳೆಲ್ಲಾ ತಾನೇ ತಾನಾಗಿ ಮಾಯವಾಗುತ್ತವೆ. ಶರಣರು ನಿರೂಪಿಸಿ. ಆಚರಿಸಿ ತೋರಿಸಿದ ಕಾಯಕತತ್ವ ಆಧಾರಿತವಾದ ಆರ್ಥಿಕ ಚಿಂತನೆಯಂತೆ ನಮ್ಮ ಸಮಾಜದ ದೇಶದ ಯೋಜನೆಗಳನ್ನು ರೂಪಿಸಿಕೊಂಡು ಅಳವಡಿಸಿಕೊಂಡು ಯಾವ ವೃತ್ತಿಯಲ್ಲೇ ಇರಲಿ, ಸೇವಕ ವೃತ್ತಿಯಾಗಲೀ ಸ್ವಾಮಿ ವೃತ್ತಿಯಾಗಲೀ, ರಾಜ ಕಾರಣವಾಗಲೀ, ಕಷ್ಟ ಕರ್ಮವಾಗಲೀ, ಸತ್ಯ ಶುದ್ಧ ಕಾಯಕ ತತ್ವದ ನಿಯಮದಂತೆ ಅರ್ಪಣಾಭಾವದಿಂದ ತಮ್ಮ ತಮ್ಮ ಕಾಯಕವನ್ನು ಮಾಡಿದರೆ, ಹೊರದೇಶಗಳಿಂದ. ಸಮಾಜವಾದದ ತತ್ವಗಳನ್ನು ಆಮದುಮಾಡಿಕೊಳ್ಳದೆ ಭಾರತೀಯರದೇ ಆದ ಸಮತಾವಾದ, ಹಾಗೂ ಸರ್ವ ಸಮಾನತೆಯ ಸಮಾಜವಾದವನ್ನು ಕ್ರಾಂತಿಯಿಲ್ಲದೆ ಸುಲಭವಾಗಿ ಸ್ಥಾಪಿಸಿ, ಇಂದಿನ ಎಲ್ಲ ಸಮಸ್ಯೆಗಳನ್ನೂ ಪರಿಹರಿಸಿಕೊಂಡು ಆರ್ಥಿಕ ಸ್ವಾತಂತ್ರ್ಯವನ್ನು ಪಡೆದುಕೊಂಡು ಜನತೆಯ ಕಲ್ಯಾಣವನ್ನು ಸಾಧಿಸಬಹುದು. ●

---

**ಬೆಳಗಲಿ 'ಸಿದ್ಧಗಂಗಾ'**

ಮನೆ ಮನೆಯ ಸೇರಲಿ ಮನ ಮನವ ತುಂಬಲಿ
ನಿತ್ಯ ನಿತ್ಯ ಬೆಳಗಲಿ ಸಿದ್ಧಗಂಗಾ.
ಸವಿಕಥೆಗಳ ಒಳಗೊಂಡು ಬರಲಿ
ಸುಂದರ ಕವನಗಳ ಕೂಡಿ ಬರಲಿ
ಸಿದ್ಧಗಂಗಾ ನಾಡೆಲ್ಲ ತುಂಬಲಿ
ಹೊಸವರ್ಷದ ಹೊಸ ವಿಷಯಗಳ
ಹೊಮ್ಮಿ ಬಂದು ಕೀರ್ತಿ ಕಾಣಲಿ.
ಅಧಿಕ ಸದಸ್ಯರ ಹೊಂದಿ ಬರಲಿ
ಕೀರ್ತಿ ತುಂಬಿ ಬೆಳಗಲಿ ಸಿದ್ಧಗಂಗಾ.

—ಚಿ. ನಂಜೇಗೌಡ

# ಸರ್ವಜ್ಞ

—ಹೆಚ್. ದೇವೀರಪ್ಪ

ಕನ್ನಡವ ಕನ್ನಡಕೆ ಕನ್ನಡಿಗರೆಲ್ಲರಿಗೆ
ಕನ್ನಡದ ಕನ್ನಡಿಯದೇನೆಂದು ತೋರಿ
ಕನ್ನಡವು ಕನ್ನಡಿಯು, ತಾ ಬೇರೆ ಅಲ್ಲ - ಈ
ಕನ್ನಡಿಯ ನೋಡದನು ಕನ್ನಡಿಗನಲ್ಲ;
ಎನ್ನುತ್ತ ಬೆಳಗಿದನು ಕನ್ನಡದ ಜಾಣ !!
ಕನ್ನಡವು ಕನ್ನಡಿಯ ಸರ್ವಜ್ಞ ಕಾಣ !! ॥

ಪಂಪ ವ್ಯಾಸನು ರನ್ನ ಹಂಪೆ ಹರಿಹರ ಜಾನು
ಸೊಂಪಿನ ಷಡಕ್ಷರಿಯು ಕಂಪು ಲಕುಮನು ಭೀಮ
ಚಂಪು ಛಂದಗಳಲ್ಲಿ ಇಂಪು ಕಾವ್ಯಕೆ ಹೋರಿ
ಪೆಂಪು ಹೆಚ್ಚಿತು ಅದರ, ಜಗಕೆ ಸೊಬಗನು ತೋರಿ ॥
ಗುಂಪು ಕಟ್ಟಿಗರೆಲ್ಲ ಇಂತು ತಮ್ಮನು ತೋರೆ
ಗುಂಪನಗಲಿದ ಕವಿಯು ನಮ್ಮ ತೋರಿದ ನೆಮಗೆ ॥
ತಿರುಳುಗನ್ನಡ ತಿರುಕ ಮರುಳನಾದನು ಅವಗೆ
ಅರಳಿ ಹೋಯಿತು ಅವನ ಸರಳ ಭಾವಕೆ ಮನವು ॥

ಕೀರ್ತಿ ಶೇಷರಾದ ಉತ್ತಂಗಿ ಚನ್ನಪ್ಪನವರು ಸರ್ವಜ್ಞನಿಗೆ ಒಪ್ಪಿಸಿದ ಭಾವ-ಕಾಣಿಕೆ ಇದು. 'ಮಂಡೆ ಬೋಳಿಸಿಕೊಂಡು' 'ತುಂಡುಗಂಬಳಿಹೊದೆದು', 'ಕರದಿ ಕಪ್ಪರ ಹಿಡಿದು' 'ಹಿಂಡನಗಲಿದ ಗಜದಂತೆ' ಕರ್ನಾಟಕ ದಾರ್ಷ್ಟ್ಯಾಂತ ಅಡ್ಡಾಡಿ, 'ತಿರಿಪರಿಂಸಿರಿವಂತರಾರು' ಎಂದು ಘೋಷಿಸುತ್ತ, ಕನ್ನಡ ಜನತೆಯ ನಡೆ ನುಡಿಗಳನ್ನು ತಿದ್ದುತ್ತ ಅನವರತವೂ ಅವರ ಲೇಸನ್ನೆ ಹಾರೈಸುತ್ತಲಿದ್ದಾನೆ ನಮ್ಮ ಸರ್ವಜ್ಞ. ಕನ್ನಡಿಗರೆಲ್ಲರೂ 'ಇವನೆಮ್ಮವ ಇವನೆಮ್ಮವ' ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ಹಿರಿಯ ಮಹಾನುಭಾವ. ಇವನ ವಚನರತ್ನಗಳ ಬೆಳಕು ಇಂದಿಗೂ ಕನ್ನಡಿಗರ ಮನದ ಮನೆಯನ್ನು ಬೆಳಗುತ್ತಿರುವುದು; ಅವರ ಬದುಕುಬಾಳುಗಳನ್ನು ಹಸನುಗೊಳಿಸುತ್ತಿರುವುದು.

ಇಷ್ಟಾದರೂ ಈತನ ಭವ್ಯಬಾಳುವೆಯ ವಿವರ ನಮಗೆ ತಿಳಿಯದು. ಕನ್ನಡನಾಡಿನ ಕನ್ನಡಿಯಂತಿರುವ ಬೆಳುವಲನಾಡಿನ ಅಂಬಲೂರು ಈತನ ಜನ್ಮಸ್ಥಳ.

ಅಂಬಲೂರೊಳಗೆಸೆವ ಕುಂಬಾರಸಾಲೆಯಲಿ
ಇಂಬಿನ ಕಳೆಯ ಮೋರೆಯೊಳು ಬಸವರಸ
ನಿಂಬಿಟ್ಟ ನೆನ್ನ ಸರ್ವಜ್ಞ ।
ತಂದೆ ಕುಂಬರ ಮಲ್ಲ ತಾಯಿ ಮಾಳಲಿದೇವಿ
ಇಂದು ಶೇಖರನ ವರಪುತ್ರ ಧರಣೀಗೆ
ಬಂದು ಜನಿಸಿದನು ಸರ್ವಜ್ಞ ॥

ಆಜನ್ಮಸಿದ್ಧನಾದ ಈತನ ಬೆಳವಣಿಗೆಯನ್ನು ದಿವ್ಯ ತೇಜಸ್ಸನ್ನೂ ಕಂಡವರು, ಸೋಜಿಗಗೊಂಡು ಕುಂಬಾರರ ಹೊಟ್ಟೆಯಲ್ಲಿ ಇಂತಹ ದಿವ್ಯ ಲಕ್ಷಣಸಂಪನ್ನ ಶಿಶು, ಎಲ್ಲಾದರೂ ಉಂಟೆ? ಎಂದುಕೊಂಡು ಮಾಳಲಿಯನ್ನೆ ಕೇಳಿದರಂತೆ. ಅದಕ್ಕೆ ಮಲ್ಲಮ್ಮ ಕೊಟ್ಟ ಉತ್ತರ, ಅದನ್ನು ಕೇಳಿ ಸರ್ವಜ್ಞ ಕೆರಳಿದ್ದು ಈ ಪದ್ಯಗಳಲ್ಲಿದೆ.

ಬೆಳೆಯಬಿನ್ನದರಿದೆಂದು ಕಳೆಯಕಂಡವರೆಲ್ಲ
ಮಳೆಯಲ್ಲಿ ಸಸಿಯಾನರಿತು ತಾಂಪಾಳಿಯನು
ತಿಳಿವವರು ಆರಿಗು ಸರ್ವಜ್ಞ ॥
ಮಾಳನೂ ಮಾಳಿಯೂ ಕೂಳಿತ್ತ ಹೆಮ್ಮೆಯಲಿ
ಕೇಳಲೆನ್ನಾರ ಮಗನೆಂದು - ನಾ ಶಿವನ
ಮೇಳದವನೆಂದೇ ಸರ್ವಜ್ಞ ॥
ನೂಕಿದ್ದರು ಅವರಾಗ ಕೂಕತಸದೊಳು ಬೇಗ
ಲೋಕದೊಳಗೆಲ್ಲ ಕಂಡುದನು ನುಡಿದು ತಾ
ನೇಕವಾಗಿಹನು ಸರ್ವಜ್ಞ ॥

ಇನ್ನೂ ಎಳೆಯನಾಗಿದ್ದಾಗಲೇ ಹುಟ್ಟಿದ ಮನೆಯನ್ನು ಬಿಟ್ಟು ಲೋಕದೊಳಗೆ ಏಕವಾಗಿ ನಡೆದ ಈತನು ಎಲ್ಲಿ ವಿದ್ಯಾಭ್ಯಾಸ ಮಾಡಿದನೋ ಯಾವ ಗುರುವು ಈತನಿಗೆ ಉಪದೇಶವಿತ್ತನೋ, ಯಾವ ಸಿದ್ಧಪುರುಷನಲ್ಲಿ ಯೋಗಸಾಧನೆ ಮಾಡಿದನೋ ಈಗ ಒಂದೂ ಗೊತ್ತಾಗುವುದಿಲ್ಲ. ಒಂದೆರಡು ಪದ್ಯಗಳಲ್ಲಿ ಮಾತ್ರ ಈತನು ವಚನಕಾರರ, ಅದರಲ್ಲಿಯೂ ಜೇಡರ ದಾಸಿಮಯ್ಯ ಮತ್ತು ಬಸವಣ್ಣನವರ ವಚನ ಸುಧೆಯನ್ನ ಸವಿದು ಅದನ್ನು ತನ್ನ ಲೋಕಾನುಭವ ಯೋಗಸಿದ್ಧಿಯೊಡನೆ ಪುದುಗೊಳಿಸಿಕೊಂಡು ವಚನ ಗನ್ನಡವನ್ನು ಮಿಸುಸಿ ಕನ್ನಡಧನ್ಯಾಗಿ ಮಾಡಿಕೊಂಡಿರುವನು ಎಂದು ತೋರುತ್ತಿದೆ.

ಅಂದು ಜೇಡರದಾಸ, ಹಿಂದೆ ನಾವರುಚಿಯು
ಇಂದು ಸರ್ವಜ್ಞ ನಾನಿಮ್ಮ - ಕರುಣದ
ಕಂದ ಕಾಣಯ್ಯ ಸರ್ವಜ್ಞ

ಹಸಿವಿಗಂಬಲಿಮುದ್ದು ಬಿಸಿಲಿಂಗೆ ಕೊಡೆಮುದ್ದು
ಬಸಿರಿಂಲಿ ಬಂದ ಮಗ ಮುದ್ದು – ಲೋಕಕ್ಕೆ
ಬಸವಣ್ಣ ಮುದ್ದು ಸರ್ವಜ್ಞ.

ಬಸವ ಗುರುವಿನ ಹೆಸರು ಬಲ್ಲವರಾರಿಲ್ಲ
ಪುಸಿಮಾತನಾಡಿ ಕೆಡದಿರಿ ಲೋಕಕ್ಕೆ
ಬಸವನೇ ಕರ್ತ ಸರ್ವಜ್ಞ.

ಮಹಾಯೋಗಿಗಳಿಗೆ ತಮ್ಮ ಪೂರ್ವಜನ್ಮದ ಅರಿ
ರುತ್ತದೆಯೆಂಬುದಕ್ಕೆ ಅನೇಕ ನಿದರ್ಶನಗಳಿವೆ. ಸರ್ವ
ಜ್ಞನು ತಾನೇ ಹೇಳಿಕೊಂಡಿರುವಂತೆ, ಹಿಂದೆ ಜೇಡರ
ದಾಸಿಮಯ್ಯನಾಗಿದ್ದವನು ; ಅದಕ್ಕಿಂತ ಮುಂಚೆ ವರ
ರುಚಿಯಾಗಿ ಹುಟ್ಟಿದ್ದವನು. ದಾಸಿಮಯ್ಯನ ಸುಜ್ಞಾನ,
ವರರುಚಿಯ ವೈರಾಗ್ಯ ಬಸವಣ್ಣನವರ ಭಕ್ತಿ ಇವುಗಳ
ರುಮುಕ್ಕೂಡಲು ಸರ್ವಜ್ಞ.

ಆದರೆ ಬಸವಣ್ಣನವರ ವಿಷಯದಲ್ಲಿ ಈತನಿಗೆ
ಎಲ್ಲೆಯಿಲ್ಲದ ಎಣೆಯಿಲ್ಲದ ಪೂಜ್ಯಭಾವ. ಹಸಿವೆಯಾದವ
ನಿಗೆ ರಾಗಿಯ ಅಂಬಲಿಯೋ ಜೋಳದ ಅಂಬಲಿಯೋ
ಕೊಡುವಷ್ಟು ತೃಪ್ತಿ ಸಮಾಧಾನವನ್ನು ದೇವಲೋಕದ
ಅಮೃತವೂ ನೀಡಲಾರದು ; ಸುಡುಬಿಸಿಲಿನಲ್ಲಿ ಏಕಾಂಗಿ
ಯಾಗಿ ಬೆವರು ಸುರಿಸುತ್ತ, ಕೊಡೆಯ ನೆಳಲು ಎಷ್ಟು
ಆನಂದದಾಯಕವಾಗಿರುವುದೆಂಬುದು ಅನುಭವಿಸಿದವರಿಗೇ
ಗೊತ್ತು. 'ಹೆತ್ತವರಿಗೆ ಹೆಗ್ಗಣ ಮುದ್ದು' ಎಂದಂತೆ
ಬಸಿರಲ್ಲಿ ಬಂದ ಮಗ ಮುದ್ದು. ಇದು ತೀರ ಸಹಜ.
ಆದರೆ ಬಸವಣ್ಣ ಲೋಕಕ್ಕೆಲ್ಲಾ ಮುದ್ದು ಹೇಗೆ? ಸುಜ್ಞಾ
ನದ ಹಸಿವಿನಿಂದ ಕೊರಗುತ್ತಿದ್ದವರಿಗೆ ಬಸವಣ್ಣನವರು
ಸದ್ಭಕ್ತಿಯ ಪ್ರಸಾದವನ್ನು, ಸುಜ್ಞಾನವೆಂಬ ಅಂಬಲಿ
ಯನ್ನು ನೀಡಿದರು. ಸಾಮಾಜಿಕ ಅನ್ಯಾಯಕ್ಕೆ ಬಲಿ
ಯಾಗಿ ಬೆಂದು ಬೇಗುದಿಗೊಂಡಿದ್ದ ದಲಿತವರ್ಗಕ್ಕೆ ನೆಲೆ
ನೆಳಲುಗಳನ್ನು ಮಾಡಿ ಕೊಟ್ಟರು. ಆದುದರಿಂದಲೇ
ತಾಯಿಯು ತನ್ನ ಬಸಿರಿನಿಂದ ಬಂದ ಮಗುವನ್ನು ಅನಂತ
ವಾತ್ಸಲ್ಯದಿಂದ ಮುದ್ದಾಡುವಂತೆ ಲೋಕವೆಲ್ಲ ಬಸವಣ್ಣ
ನವರನ್ನು ಮುದ್ದು ಮಾಡುವುದು. ನಾಡೋಜನಾದ
ಸರ್ವಜ್ಞನು ಈ ವಚನದಲ್ಲಿ 'ಮುದ್ದು' ಎಂಬ ಮಾತನ್ನು
ಅತ್ಯಂತ ಸಮರ್ಥರೀತಿಯಲ್ಲಿ ಬಳಸಿಕೊಂಡಿದ್ದಾನೆ. ಬಸವ
ಗುರುವಿನ ಹೆಸರನ್ನು ಬಲ್ಲವರಿಲ್ಲವೆ ? ಹುಸಿ ಮಾತನ್ನಾಡಿ
ಕೆಡಬೇಡಿ. ಲೋಕಕ್ಕೆ ಬಸವನೇ ಕರ್ತ, ಎಂದು ಸಹಜ
ವಾದ ಅಭಿಮಾನದಿಂದ, ಅಕ್ಕರೆಯಿಂದ ಅಣ್ಣನವರನ್ನು
ಕೊಂಡಾಡಿದ್ದಾನೆ. ಒಬ್ಬ ಮಹಾತ್ಮನು ಇನ್ನೊಬ್ಬ
ಮಹಾತ್ಮನಿಗೆ ಒಪ್ಪಿಸಿರುವ ಕವನ–ಕಾಣಿಕೆಗಳಿವು.

ಈತನಿಗೆ ತಾಯಿತಂದೆಗಳಿಟ್ಟ ಹೆಸರಾವುದೋ
ತಿಳಿಯದು. ಸರ್ವಜ್ಞಮೂರ್ತಿ ಎಂದೇ ರೂಢಿಯ
ಹೆಸರು. ಚಾಲುಕ್ಯ ಚಕ್ರವರ್ತಿ ಸೋಮೇಶ್ವರನು
'ಮನಸೋಲ್ಲಾಸ' ಎಂಬ ಗ್ರಂಥವನ್ನು ಬರೆದಿದ್ದಾನೆ.
ಆ ಗ್ರಂಥ ಸಂಸ್ಕೃತದಲ್ಲಿದೆ ; ವಿಶ್ವಕೋಶಸದೃಶವಾದ್ದು.
ಅದರಲ್ಲಿ ಕನ್ನಡ ತ್ರಿಪದಿಯ ಲಕ್ಷಣವನ್ನು ಹೇಳಿದೆ.
ಸರ್ವಜ್ಞ ಕೃತಿಯೂ ಒಂದು ರೀತಿಯಲ್ಲಿ ವಿಶ್ವಕೋಶವೆ.
ಈತನ ವಚನಗಳು ತ್ರಿಪದಿಯ ಛಂದಸ್ಸಿನಲ್ಲಿವೆ. ಸೋಮೇ
ಶ್ವರ ತನ್ನ ಹಲವು ಶಾಸನಗಳಲ್ಲಿ ಹೇಳಿಕೊಂಡಿರುವಂತೆ
ಸರ್ವಜ್ಞ ಚಕ್ರವರ್ತಿ ; ಈತ ಸರ್ವಜ್ಞ ಭಿಕ್ಷಾವರ್ತಿ.
ಆದುದರಿಂದ ಆ ಸರ್ವಜ್ಞನಿಗೂ ಈತನಿಗೂ ಏನೂ
ಸಂಬಂಧವಿಲ್ಲ. ಆದರೆ ಸೋಮೇಶ್ವರನು ಹೇಳುವ ಪ್ರಕಾರ
ತ್ರಿಪದಿಯ ಎರಡನೆಯ ಪಾದದ ಅರ್ಧವನ್ನು ಹೇಳಿ,
ಮತ್ತೆ ಅದೇ ಪಾದವನ್ನು ಹಾಡಿ ಅನಂತರ ನಾಲ್ಕನೆಯ
ಪಾದವನ್ನು ಹಾಡಬೇಕು. ಸರ್ವಜ್ಞನು ಇದೇ ನಿಯಮ
ವನ್ನು ಪಾಲಿಸಿದ್ದಾನೆ. ಕೇಳಿ,

ಸರ್ವಜ್ಞನೆಂಬುವನು ಗರ್ವದಿಂದಾದವನೆ
ಸರ್ವರೊಳೊಂದು ನುಡಿಗಲಿತು
ಸರ್ವರೊಳೊಂದು ನುಡಿಗಲಿತು ವಿದ್ಯದ
ಪರ್ವತವೇ ಆದ ಸರ್ವಜ್ಞ

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ
ಒಬ್ಬ ಸರ್ವಜ್ಞ ಕರ್ತನು,
ಒಬ್ಬ ಸರ್ವಜ್ಞ ಕರ್ತನು ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ.

ಹೀಗೆ ಎರಡನೆಯ ಪಾದದ ಮೂರು ಗಣ
ಗಳನ್ನು ಅಂದು, ಮತ್ತೆ ಆ ಪಾದವನ್ನು ಪೂರ್ತಿಯಾಗಿ
ಪುನರಾವರ್ತನೆ ಮಾಡಿ ಅನಂತರ ನಾಲ್ಕನೆಯ ಪಾದ
ವನ್ನು ಅನ್ನಬೇಕು. ಆಗಲೆ ತ್ರಿಪದಿಯು ಮೂರುಕಾಲಿನ
ಮಣೆಯಂತೆ ಅಭದ್ರವಾಗದೆ ನಾಲ್ಕುಕಾಲಿನ ಮಣೆ

ಯಂತೆ ಸುಭದ್ರವಾಗುತ್ತದೆ. ಇಂದಿನ ಮೂರುಗಾಲಿಯ ವಾಹನಗಳ ಗತಿಯನ್ನೂ ಸಾಗಾಲಿಯ ಗತಿಯನ್ನೂ ಹೋಲಿಸಿ ನೋಡಿದರೆ ಈ ಅಂಶ ಸುಸ್ಪಷ್ಟವಾಗುತ್ತದೆ. ತ್ರಿಪದಿಯನ್ನು ಸೋಮೇಶ್ವರ ಹೇಳುವ ರೀತಿಯಲ್ಲಿ ಹಾಡಿದರೇನೇ ಅದು ಅರ್ಥಭಾವ ರಸರಾಗ ತುಂಬಿ ಆಹ್ಲಾದವನ್ನುಂಟು ಮಾಡುತ್ತದೆ. ನಮ್ಮ ಜಾನಪದ ದಲ್ಲಿ ಈ ಮಟ್ಟ ತುಂಬ ಬಳಕೆಯಲ್ಲಿದೆ. ಅದರ ಒಂದು ತುಣುಕು ಇದು ;

ಮಾವಿನ ಹೂವಿಗೆ ಯಾರು ಬಂದರು ಕಳ್ಳರು,
ದೇವೇಂದ್ರ ತನ್ನಾ ಮಡದೀಯ,
ದೇವೇಂದ್ರ ತನ್ನಾ ಮಡದೀಯ ಬಯಕೇಗೆ
ಮಾಯದಲಿ ಮುಗಿಲ ಕಳುಹೀದ ||

ಸರ್ವಜ್ಞನಿಗೆ ಜನಪದ ಸಾಹಿತ್ಯವೇ ವಚನದ ರಚನೆಯ ಗುರು ; ಅನುಭಾವ ವಿದ್ಯೆಗೆ ಜೇಡರ ದಾಸಿ ಮಯ್ಯ, ಬಸವಣ್ಣನವರು ಗುರುಗಳು ; ಯೋಗ ವಿದ್ಯೆಗೆ ಗುರು ಯಾರೆಂಬುದು ಇನ್ನೂ ಸಂಶೋಧನೆಯಾಗಬೇಕು.

'ಸರ್ವಜ್ಞ' ಎಂಬ ಮುದ್ರೆಯ ಎರಡುಸಾವಿರಕ್ಕೂ ಹೆಚ್ಚಿನ ಸಂಖ್ಯೆಯ ವಚನಗಳು ಈಗ ನಾಡಿನಲ್ಲೆಲ್ಲ ಚಲಾವಣೆಯಲ್ಲಿವೆ. ಅವುಗಳಲ್ಲಿ ಸರ್ವಜ್ಞನ ಕಮ್ಮಟ ದಿಂದ ಹೊರಬಿದ್ದ ನಾಣ್ಯಗಳೆಷ್ಟು ನಕಲಿ ನಾಣ್ಯಗಳೆಷ್ಟು, ಅವು ಯಾವುವು ಎಂಬುದನ್ನು ಗುರುತಿಸುವ ಕಾರ್ಯ ಇನ್ನೂ ಆಗಬೇಕಾಗಿದೆ. ಅವುಗಳಲ್ಲಿ ಒಂದು ಸಾವಿರ ವಾದರೂ ಸರ್ವಜ್ಞ ವಿರಚಿತ ಎಂದು ತೋರುತ್ತಿದೆ. ಸೋಮೇಶ್ವರ ಚಕ್ರವರ್ತಿಯ 'ಮನಸೋಲ್ಲಾಸಕ್ಕೆ' 'ಅಭಿ ಲಷಿತಾರ್ಥ ಚಿಂತಾಮಣಿ' ಎಂಬ ಇನ್ನೊಂದು ಹೆಸರಿದೆ. ಸರ್ವಜ್ಞ ವಚನರಾಶಿಗೆ 'ಕನ್ನಡ ಅಭಿಲಷಿತಾರ್ಥ ಚಿಂತಾ ಮಣಿ' ಎಂದೋ ಕನ್ನಡದ ವಿಶ್ವಕೋಶ ಎಂದೋ ಕರೆದರೆ ಅನುಚಿತವಾಗಲಾರದು.

ಗುರುಪದ್ಧತಿ ಲಿಂಗ ಪದ್ಧತಿ, ಇಷ್ಟಲಿಂಗಪದ್ಧತಿ, ಶೈವಪದ್ಧತಿ, ಭಕ್ತ, ಮಹೇಶ್ವರ, ಜ್ಞಾನಯೋಗ ಶಿವ ಯೋಗ ಪದ್ಧತಿಗಳು ಪಾರಮಾರ್ಥಿಕ ವಿಷಯಗಳನ್ನು ಒಳ ಗೊಂಡಿವೆ. ದಾನಪದ್ಧತಿ, ರಾಜನೀತಿ ಪದ್ಧತಿ, ಸಂಗ ಪದ್ಧತಿ, ವಿಧಿವಶಪದ್ಧತಿ, ಬ್ರಾಹ್ಮಣ ಜೈನ ಪದ್ಧತಿಗಳು ಜ್ಯೋತಿಷ, ರಸವಾದ, ಕಾಲಜ್ಞಾನ, ಸ್ತ್ರೀ ಪದ್ಧತಿ ಮುಂತಾದವು ಮುಖ್ಯವಾಗಿ ಲೌಕಿಕ ವಿಚಾರಗಳನ್ನುಳ್ಳವು.

'ಪದ್ಧತಿ' ಎಂಬ ತಲೆ ಹೆಸರು ಈತನಿಟ್ಟಿರುವುದೇ. ಯಾ ಪದ್ಧತಿಯ ಯಾವ ಪದ್ಯವೇ ಇರಲಿ, ಪಂಡಿತರಿಗೆ, ಪಾಮ ರಿಗೆ ಸ್ತ್ರೀ ಬಾಲ ವೃದ್ಧರಿಗೆ ಅರ್ಥವಾಗುವಂತೆ ಬ ಸುಲಭ ಶೈಲಿಯಲ್ಲಿರುತ್ತವೆ, ರಮಣೀಯವಾಗಿರುತ್ತ "ಕಿರಿದರೊಳೆ ಪಿರಿದು ಅರ್ಥ"ವನ್ನಿಟ್ಟು ಹೇಳುವ ಕ ಗಾರಿಕೆ ಸರ್ವಜ್ಞನಿಗೆ ಸಿದ್ಧಿಸಿರುವಷ್ಟು ಮತ್ತಾರಿಗೂ ಸಿ ಸಿಲ್ಲ. ಸಿದ್ಧಿ ಪಡೆದವರಿದ್ದಾರೆ ಎನ್ನುವುದಾದರೆ ಅದ ಜೇಡರ ದಾಸಿಮಯ್ಯ ಮೊದಲಿಗನಾಗುತ್ತಾನೆ. ಅ ಅವತಾರವೇ ಸರ್ವಜ್ಞ ಎಂಬುದನ್ನು ಈ ಮೊದ ಹೇಳಿದೆ.

ರಸಿಕರ ಸರ್ವಜ್ಞನ ಮಾತಿನ ಮೋಡಿ ನೋ ಭಾವದ ಕಾವು ನೋಡಿ, ಕನ್ನಡದ ಕನ್ನಡಿ ನೋಡಿ.

ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ
ರಸಿಕನಲ್ಲದನ ಬರುಮಾತು
ರಸಿಕನಲ್ಲದನ ಬರುಮಾತು ಕಿವಿಯೊಳಗೆಕೂರ್
ದಸಿಯು ಬಡಿದಂತೆ – ಸರ್ವಜ್ಞ.

ಮಾತು ಬಲ್ಲಾತಂಗೆ ಏತವದು ಸುರಿದಂತೆ
ಮಾತಾಡಲರಿಯದಾತಂಗೆ
ಮಾತಾಡಲರಿಯದಾತಂಗೆ ಬರಿಯೇತ
ನೇತಾಡಿದಂತೆ ಸರ್ವಜ್ಞ.

ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ
ಬಲ್ಲಿದರು ಇದ್ದು ಬಲವಿಲ್ಲ
ಬಲ್ಲಿದರು ಇದ್ದು ಬಲವಿಲ್ಲ – ಸಾಹಿತ್ಯ
ವೆಲ್ಲರಿಗಿಲ್ಲ – ಸರ್ವಜ್ಞ.

ಇಲ್ಲಿ, 'ಸಾಹಿತ್ಯ' ಎಂದರೆ ಯೋಗ; ಪ್ರಾಪ್ತಿ ಅಥವಾ ಅದೃಷ್ಟ ಎಂದರ್ಥ; ಕಾವ್ಯರಾಶಿ ಎಂದಲ್ಲ.

ಅಲ್ಲಪ್ಪನೂರಲಿ ಬಲ್ಲಪ್ಪ ಅಲ್ಲಪ್ಪ
ಬಲ್ಲಪ್ಪನಿಲ್ಲದೂರಲಿ
ಬಲ್ಲಪ್ಪನಿಲ್ಲದೂರಲಿ ಅಲ್ಲಪ್ಪ
ಬಲ್ಲಪ್ಪನ ಅಪ್ಪ – ಸರ್ವಜ್ಞ

ಅಲ್ಲಪ್ಪನ ಊರಿನಲ್ಲಿ ಬಲ್ಲಪ್ಪ ಇದ್ದರೂ ಅವನ ಅಲ್ಲಪ್ಪ. ಬಲ್ಲಪ್ಪನಿಲ್ಲದ ಊರಿನಲ್ಲಿಯೂ, ಅಲ್ಲಪ್ಪ ನೆ ಬಲ್ಲಪ್ಪ. —ಹೀಗೆ ಸರ್ವಜ್ಞನ ಮಾತು ಬಾಣ ಬಿಟ್ಟಂ ಗುಂಡು ಹೊಡೆದಂತೆ ನೇರವಾಗಿ ಗುರಿಯನ್ನು ತಪ್ಪ ತಾಗುತ್ತವೆ.

## ಕಾವ್ಯವಾಹಿನಿ



## ಸಹಬಾಳ್ವೆ

—ಎಸ್. ಡಿ. ಗುರುಗೋವಿಂದಯ್ಯ

ಒಂದೇ ಒಂದೇ ನಾವ್ ಒಂದೇ
ಹಿಂದೆ ಮುಂದೆ ಸಾಗುವೆವು
ಒಬ್ಬರನೊಬ್ಬರು ಸೇರುವೆವು
ಬೊಬ್ಬಿರಿ ಕಹಳೆಯ ಊದುವೆವು
ದಂಡು ದಳಗಳ ಸಂಖ್ಯೆಯು ಏರುತ
ಮುಂದಿ ಮಾರ್ಬಲ ಅಂಕೆಯು ಮೀರುತ
ನಿಂತವ ರಾಗದ ಅಂತರ ಸೇರುತ
ಸಂತಸವಿಟ್ಟವು ಸಂಗವ ಸೇರಿ
ನಮ್ಮದು ತಮ್ಮದು ಭೇದವೆ ಇಲ್ಲ
ನೆಮ್ಮದಿಯೊದಗಿತು ಹಮ್ಮನು ತೊರೆಯಲು
ಸುಮ್ಮನೆ ಕೂಡದೆ ರಾಗವನೆತ್ತಲು
ನೆತ್ತರನೇರಿತು ಜೈ ಭಾರತ ಮಾತೆ
ಹಿರಿಯರು ಕಿರಿಯರು ಎಲ್ಲರೂ ಒಂದೇ
ಮರಿಗಳು ಮಕ್ಕಳು ಕೂಡಿದರಿಂದೆ
ಕರೆಯನು ಕೇಳುತ ಸೇರಿದರು ಮುಂದೆ
ಕರಗಿತು ದಾರಿಯು ದೂರದ ಹಿಂದೆ
ಬಾಧೆಯ ಭೇದವು ಬಳಿಯಲಿ ಇಲ್ಲ
ಭೇದವು ನಮ್ಮಲಿ ಸುಳಿಯಲೆ ಇಲ್ಲ
ರೋದನ ಮಾಡುವ ಜೀವನವಲ್ಲ
ವಿರೋಧವನೆಂಬುದ ತಿಳಿಯಲೆ ಇಲ್ಲ
ಕ್ರಾಂತಿಯ ಭ್ರಾಂತಿಯ ಭಾವನೆ ಇಲ್ಲ
ದೋಷಕೆ ರೋಷಕೆ ಎಡೆಯು ಇಲ್ಲ
ದ್ರೋಹಿಯ ಮನಸಿನ ಒಡಕೆ ಇಲ್ಲ
ಪ್ರೇಮದ ದಾರಿಯ ಬಿಡಲೆ ಇಲ್ಲ
ಜಾತಿಯ ಅಂತರ ಉಳಿಯಿತು ಹಿಂದೆ
ಪ್ರೇಮದ ಅಲೆಯನು ಸರುಗಿತು ಮುಂದೆ
ಪ್ರೀತಿಯ ಭೇರಿಯು ಅಡಿ ಅಡಿ ಮುಂದೆ
ಶಾಂತಿಯ ನೆಲೆಯನು ಹುಡುಕುತ ಮುಂದೆ.

---

## ಬಂಧನ

—ಆರ್. ಎಂ. ಶಿವಲಿಂಗಪ್ಪ

ನಿನ್ನ ಕರುಣೆಯ ಕಂದನ ಯಾಕೆ ಈ ಭವ ಬಂಧನ
ಸೃಜಿಸುತ್ತಲೇ ಇಟ್ಟೆ ತಾಯಿ ಗರ್ಭದ ಬಂಧನ
ಒಂದೆರಡು ದಿನವಲ್ಲ ಮಾಸ ಮೂರಲ್ಲ
ನೀ ಕೊಟ್ಟ ಶಿಕ್ಷೆ ಸೆರೆವಾಸ ಅನುಭವಿಸಿದೆ ನವಮಾಸ
ಹುಟ್ಟೆಂಬ ಹೆಸರೊತ್ತು ಅಲ್ಲಿಂದ ಬಂದೆ
ಹಿಂದೆಯೇ ಬರುವೆನೆಂದೆ ಸಾವೆಂಬ ಸರ್ದಾರ
ಸಾಕು ಸಾಕಣ್ಣಾಗಳಿರಾ ಸಹವಾಸವೆಂದೆ
ಅಂದೆ ಬಂದಿತು, ಬೇಡಿ ತಂದಿತು, ಅರಿಷಡ್ವರ್ಗದ ಸೇನೆ
ಪಾರಾಗುವ ಬಗೆ ಇನ್ನೆಂತೆಂದು ಉಕ್ಕಿತು ಕಣ್ಣೀರು
ಸೋನೆ
ಅಬ್ಬರಿಸಿ ಆರ್ಭಟಿಸಿದರೂ ಆಲಿಸದಾದ ಅಂಬರವ ಆಗಸ
ಉಕ್ಕುಕ್ಕಿ ಬರುತಿಹ ದುಃಖ ದೂರ ಮಾಡುವರಾರೋ,
ಅಬ್ಬರ, ಆರ್ಭಟ, ದುಃಖ ಬಲು ಅಗ್ಗ ಅವನಿದಕೆಲ್ಲ
ಬಗ್ಗ
ಸತ್ಯವೆಂಬ ಬಿಲ್ಲನೆ ಹಿಡಿದು ಸದ್ಭಕ್ತಿಯೆಂಬ ಬಾಣವ
ಹೂಡಿ,
ಹೊಡೆಯಲು ಅರಿಯಿತು ಅರಿಷಡ್ವರ್ಗದ ಬೇಡೆ
ಓಡೋಡಿ ನೀ ಬಂದೆ, ದೀನ ಭಕ್ತನ ರೋದನವ ಕಂಡೆ ;
ಬಲು ಬೇಗ ಭಕ್ತನಿಗೆಂದೆ ಹರಿಯಿತು ಈ ಇಳೆಯ ಭವ
ಬಂಧನ
ಏನು ಹೇಳಲಿ ಭಕ್ತನಾನಂದ ಆಗಸಕೆ ಹಾರುವಾತುರದಿ
ಅವನೆಂದ
ತರಿಸಯ್ಯ ವಿಮಾನ ಬೇಗ ಹೋಗಾನ.

# ಗೆನಿಯ (ಒಬ್ಬ ಗುಪ್ತಾಚಾರಿಣಿಯ ಕಥೆ)

—ಎನ್. ಪಂಕಜ

ಘೋರಾಂಧಕಾರ! ನಿಶಿ, ನೀರವತೆಯ ಸೆರಗಿನಲ್ಲಿ ಸ್ವಪ್ನ ಕಾಣುತ್ತಿದೆ. ಟೊಂಗೆ, ಎಲೆಗಳ ಸರ ಸರ, ಟಪಟಕಃ ಸಪ್ಪಳ ಸಹ ಕೇಳಬರುತ್ತಿಲ್ಲ. ಇನಿಸು ಜೋರಾಗಿ ಬೀಸಿದರೂ, ಆ ಸುಖ ಸ್ವಪ್ನವೆಲ್ಲಿ ಭಂಗ ವಾಗುವುದೋ ಎಂದು ಅಳುಕಿದಂತಿದ್ದ ಮಾರುತನ ಸುಳಿವೂ ಇಲ್ಲ.

ಆಗ ಮೇಲು ಹೆಜ್ಜೆ ಹಾಕುತ್ತಾ ಎರಡು ವ್ಯಕ್ತಿಗಳು ರೈಲ್ವೆ ಕಂಬಿಗಳನ್ನು ಸಮೀಪಿಸಿದವು. ತುಸು ಕಾಲ ಅಲ್ಲಿದ್ದು, ಹಿಂದಕ್ಕೆ ಮರೆಯಾಗಿ ಗಿಡಗಂಟೆಗಳ ನಡುವೆ ನಿಂತವು—ಕಾದರು. ಕಿರ್ರೆಂದು ಕಿರುಚುತ್ತ, ರೈಲೊಂದು ತೀವ್ರ ರಭಸದಿಂದ ಓಡಿ ಬಂತು; ಇದ್ದಕ್ಕಿದ್ದಂತೆ, ಭಾರಿ ಸ್ಫೋಟವಾಯಿತು— ರೈಲು ಉರುಳಿತು— ಕಂಬಿಗಳ ಮೇಲೆ, ಅಡ್ಡಲಾಗಿ ಚಾಚಿ ಮಲಗಿತು.

''ನಿಮ್ಮಿಬ್ಬರನ್ನೂ ಎಷ್ಟು ಹೊಗಳಿದರೂ ಸಾಲದು ಹಿಂತಿರುಗಿದ ಆ ಈರ್ವರನ್ನೂ ಜರ್ಮನ್ ಗೂಢಾಚಾರರ ದೊರೆಯಾದ ಲೆಪ್ಟಿನಂಟ್ ಚಾರ್‌ಮೈಸ್ಟರ್ ಪ್ರಶಂಸಿದನು. ರಷ್ಯನ್ ಹೆಡ್‌ಕ್ವಾರ್ಟರ್ಸ್‌ಗೆ ಭಾರಿ ಯುದ್ಧ ಸಾಮುಗ್ರಿಗಳು ತಲುಪದಂತೆ ಮಾಡಿದ ಈ ನಿಮ್ಮ ಸಾಹಸ, ನಮ್ಮ ದೇಶದ ಇತಿಹಾಸದಲ್ಲೇ ಅಚ್ಚಳಿಯದಂತೆ ನಿಲ್ಲುವಂತಹದು. ಆ ಮುಖ್ಯ ರೈಲ್ವೆ ಕಂಬಿಗಳ ನಾಶ ರಷ್ಯಾಗೆ ತುಂಬಲಾರದ ನಷ್ಟ!

''ಗೆನಿಯ ಬರುವ ಹೊತ್ತಿಗೆ ಕೆಲಸ ಹಗುರವಾಯಿತು'' ಫೆಲಿಕ್ಸ್ ಅವಳನ್ನೇ ಅಭಿಮಾನದಿಂದ ನೋಡಿದ ''ಅವಳೊಬ್ಬಳು ಜೊತೆಯಲ್ಲಿದ್ದರೆ ಸಾಕು, ಎಂತಹ ಕಠಿಣ ಕೆಲಸವನ್ನು ಬೇಕಾದರೂ ಲೀಲಾಜಾಲವಾಗಿ ನಿರ್ವಹಿಸಬಲ್ಲೆ''.

"ನಿಜ, ಗೆನಿಯ ನಮ್ಮ ಗುಂಪಿನ ರತ್ನ'' ಚಾರ್‌ಮೈಸ್ಟರ್ ಒಪ್ಪಿಕೊಂಡನು. "ಅವಳ ವಯಸ್ಸೇನು— ಅವಳು ಎಸಗಿರುವ ಸಾಹಸ ಕೃತ್ಯಗಳೇನು! ಅವಳಿಗೆ ತಕ್ಕ ಜೋಡಿ-ನೀನು ಫೆಲಿಕ್ಸ್, ದೇವರು ನಿಮ್ಮಿಬ್ಬರನ್ನೂ ಸುಖಿಯಾಗಿಡಲಿ''. "ಸುಖ" ಫೆಲಿಕ್ಸ್ ಆವೇಶದಿಂದ ಮುಷ್ಟಿ ಹಿಡಿದನು "ಈ ಹಾಳು ರಷ್ಯಾ ಸೋತು ಸತ್ತಾಗಲೇ ನನಗೆ ಸುಖ! ಆ ದಿನ ಬೇಗ ಬರುವಂತೆ ಪ್ರಯತ್ನಿಸುವುದೇ ನನ್ನ ಗುರಿ''.

ಗೆನಿಯ ಬಂದು ಅವನ ಪಕ್ಕದಲ್ಲಿ ನಿಂತುಕೊಂಡಳು. ತುಂಬು ಚೆಲುವಾದ ಹೆಣ್ಣು—ಅವನೂ ಏನೂ ಕಡಿಮೆಯಿಲ್ಲ. ಈರ್ವರೂ ಅಕ್ಕಪಕ್ಕದಲ್ಲಿ ನಿಂತುಕೊಂಡರೆ ಸರಿ, ದೃಷ್ಟಿ ತಾಗುವಂತಿತ್ತು! ಇವಳ ಮೋಹಕ ರೂಪ, ಅವನ ಆಕರ್ಷಕ ನಗೆ, ಎರಡೂ ಬೆರೆತು, ಬೆಳದಿಂಗಳ ನೆನಪು ತರುತ್ತಿತ್ತು.

ಯುದ್ಧ ಮುಗಿದ ಕೂಡಲೆ, ಈರ್ವರೂ ಮದುವೆಯಾಗುವವರಿದ್ದರು.

ಆಗ ಅದು ಮೊದಲನೆಯ ಮಹಾಯುದ್ಧದ ಸಮಯ; ಎಲ್ಲೆಡೆಯೂ ಗೂಢಾಚಾರರ ಕಳ್ಳ ಓಡಿಯಾಟ ಸತತವಾಗಿ ಸಾಗಿತ್ತು. ಅದೊಂದು ಅಸೀಮ ಸಾಹಸೀಕರ, ಚತುರರ, ಅಸಾಧಾರಣ ದೇಶ ಪ್ರೇಮಿಗಳ ವೃತ್ತಿ. ಎಲ್ಲರನ್ನೂ ಮೀರಿಸುವ ಜಾಣ್ಮೆಯಿಂದ ಗೆನಿಯ ಅದ್ಭುತ ಸುದ್ದಿಗಳನ್ನು ಗುಪ್ತಾಂತರರ ದೊರೆ ಚಾರ್‌ಮೈಸ್ಟರ್‌ಗೆ ಸಂಗ್ರಹಿಸಿ ತಂದಳು, ಅವನು ವಹಿಸಿ ಕೊಟ್ಟ ಎಂತಹ ಕಠಿಣ ಕೆಲಸವನ್ನೂ ಯಶಸ್ವಿಯಾಗಿ ನಿರ್ವಹಿಸಿದಳು.

ರಷ್ಯನರು ಒಡೆಸ್ಸಾದಲ್ಲಿ ಗುಟ್ಟಾಗಿ ಕಲೆ ಹಾಕುತ್ತಿದ್ದ ಸೈನ್ಯ ಶಾಖೆಯ ವಿಷಯ, ಅಲ್ಲಿನ ಮಿಲಿಟರಿ ಆಫೀಸರುಗಳ ಮುಂದಿನ ಯೋಜನೆ, ಇವನ್ನೆಲ್ಲ ತುರ್ತಾಗಿ ತಿಳಿಯಬೇಕಾದ ಪ್ರಸಂಗ ಬಂದಾಗ, ಬರ್‌ಮೈಸ್ಟರ್‌ಗೆ ಮೊದಲು ನೆನಪಾದ ವ್ಯಕ್ತಿ —ಗೆನಿಯಾಳೆ.

ಮರು ಮಾತಿಲ್ಲದೆ ತೆರಳಿದ ಅವಳು, ರಷ್ಯನ್ ಸೈನ್ಯದ ಹಿರಿಯಧಿಕಾರಿಯೋರ್ವನನ್ನು ಅಲ್ಲಿ ಗುರುತು ಮಾಡಿಕೊಂಡಳು. ಸ್ನೇಹ ಬೆಳೆಯಿತು; ಪ್ರೇಮ ಬೆಳೆಯಿತು. ಅವರ ಕೂಡ ಪಾರ್ಟಿಗೆ ಹೋದಳು, ಸಿನೀಮ ನೋಡಿದಳು, ಟೀ ತೆಗೆದುಕೊಂಡಳು. ರಷ್ಯ ಸೈನ್ಯ ವಾರ್‌ಸಾ ಇಂದ ಹೆಮ್ಮೆಟ್ಟಿದಾಗ, ತಾನು ಪಟ್ಟ ಪಾಡು, ಒಡೆಸ್ಸಾದಲ್ಲಿರಬಹುದೆಂದು ಊಹಿಸಲಾದ ತನ್ನ

ಸಂಬಂಧೀಕರನ್ನು ಹುಡುಕುತ್ತ ಇಲ್ಲಿಗೆ ಬಂದುದು, ಬಂದ ಮೇಲೆ, ಅವರುಗಳು ರಷ್ಯಕ್ಕೆ ಮರಳಿಸುವ ಸುದ್ದಿ ಕೇಳಿದುದು, ರೈಲ್ವೆ ಖರ್ಚಿಗೆ ಸಹಾ ದುಡ್ಡಿಲ್ಲದೆ ಒದ್ದಾಡುತ್ತಿರುವ ತನ್ನ ಪರಿಸ್ಥಿತಿ ಪ್ರತಿಯೊಂದನ್ನೂ ಹೃದಯ ವಿದ್ರಾವಕವಾಗಿ ವರ್ಣಿಸಿದಳು.

ಅವನ ಮನಸ್ಸು ಕರಗಿತು. ಅವಳ ಖರ್ಚಿಗೆಂದು ನೂರು ರೂಬೆಲ್ಲನ್ನು ಕೊಟ್ಟನು. ತನಗೇ ತಿಳಿಯದಂತೆ, ಅವಳಿಗೆ ಬೇಕಾದ ಸಮಾಚಾರವೆಲ್ಲವನ್ನೂ ತಿಳಿಸಿದನು, ತನ್ನನ್ನು ಮದುವೆಯಾಗುವಂತೆ ಕೇಳಿಕೊಂಡನು. ಅವಳು ಒಪ್ಪಿದಳು. ಅವನ ಆನಂದಕ್ಕೆ ಪರಿಯೇ ಉಳಿಯಲಿಲ್ಲ.

ರಷ್ಯಾದಲ್ಲಿರುವ ನನ್ನ ಮನೆಯವರನ್ನು ನೋಡಿ ಸಮಾಚಾರ ಅರುಹಿ ಬರುವೆ ಎಂದು ಅವಳು ಹೊರಟು ನಿಂತಾಗ, ಮನಸ್ಸಿಲ್ಲದ ಮನಸ್ಸಿನಿಂದ ಬೀಳ್ಕೊಟ್ಟನು. ರೈಲ್ವೆ ಟಿಕೆಟ್ಟನ್ನು ತೆಗೆದುಕೊಟ್ಟು ದಾರಿ ಖರ್ಚಿಗೆಂದು ಕೈಯಲ್ಲಿ ಹಣ ಇಟ್ಟು, ಅತ್ಯಂತ ಭಾವಾವೇಶದಿಂದ ಕಳುಹಿಸಿಕೊಟ್ಟನು

ಕಣ್ಮರೆಯಾದ ಕೂಡಲೆ ಆ ಟಿಕೆಟ್ಟನ್ನು ಹರಿದು; ಗಡಿಯ ಬಳಿ ಬರುವ ಬೇರೊಂದು ಟ್ರೈನನ್ನು ಹಿಡಿದು, ಹಕ್ಕಿ ತನ್ನ ಗೂಡಿಗೆ ಮರಳಿತ್ತು !

ಆ ಸಲ ಅವಳು ತಂದ ವರ್ತಮಾನ, ಪಕ್ಕೂ ಅತ್ಯಮೂಲ್ಯವಾಗಿತ್ತು !

ಆದರೆ, ಇಂತಹಯೇ, ಮತ್ತೊಂದು ಬಾರಿ, ಮುಖ್ಯ ಸುದ್ದಿ ಸಂಗ್ರಹಿಸಿ ಬರಲು ಹೊರಟ. ಗೆಸಿಯ ನೀ ಹಿಂತಿರುಗಲೇ ಇಲ್ಲ! ಅವಳು ತಿಳಿಸಿ ಹೋದ ಅವಧಿ ಮುಗಿಯಿತು. ... ಪ್ರತಿ ಇರುಳೂ ಚಾರ್‌ಮೈರ್ ಅವಳಿಗಾಗಿ ಕಾದು ಸಾಕಾದನು. ಬೀಳ್ಕೊಡುವ ಮುನ್ನ ನಡೆದ ಸಂಭಾಷಣೆಯನ್ನು ನೆನೆದು, ಅವನ ಹೃದಯ ಭೀತಿಯಿಂದ ಹೆಪ್ಪುಗಟ್ಟಿತು.

'ಯಾಕೆ ಗೆಸಿಯಾ, ಏನೋ ಒಂದು ತರಹ ಇದ್ದೀಯಲ್ಲಾ? ಮೈ ಹುಶಾರಿಲ್ಲವೆ?' ವ್ಯಾಕುಲಳಾಗಿ ಇರುತ್ತೆ ಕಂಡುಬಂದ ಅವಳನ್ನು ಆತಂಕದಿಂದ ವಿಚಾರಿಸಿದನು. "ಏನಿಲ್ಲ", ಅವಳು ಮಾತು ಹಾರಿಸಲು ನೋಡಿದಳು, "ಏನೋ ಬರೀ ಹುಚ್ಚು ಯೋಚನೆ... ಅಂಥ ಭೀತಿ...." "ಅಂದರೆ? ಬಿಡಿಸಿ ಹೇಳು ಗೆಸಿಯ; ನಿನ್ನ ಮನಸ್ಸೂ ಹಗುರವಾಗುತ್ತೆ."

"ಅ...ಅಂತಹುದೇನಿಲ್ಲ; ನೆನ್ನೆ ರಾತ್ರಿ ನನ್ನ ತಾಯಿಗೆ ಒಂದು ಸ್ವಪ್ನ ಆಯಿತು....ನೀಳ ಶ್ವೇತ ವಸ್ತ್ರ ಧಾರಿಣಿಯಾದ ನನ್ನನ್ನು ಕಂಡಳಂತೆ, ಶುಭ್ರ ಶ್ವೇತ ಗುಲಾಬಿ ಹೂವನ್ನು ಮುಡಿದಿದ್ದೆನಂತೆ. ಬೆಳಿಗ್ಗೆಯಾಗುತ್ತಲೂ ಹೇಳಿದಳು, "ಇದರ ಅರ್ಥ ಏನು ಗೊತ್ತೆ ಗೆಸಿಯಾ? ಶ್ವೇತ ವಸ್ತ್ರ, ಶ್ವೇತ ಕುಸುಮ ಎಂದರೆ, 'ಸಾವು' ಎಂದು ! ಖಂಡಿತ ಈ ಒಂದು ಬಾರಿ ಹೋಗಬೇಡ ಮಗು ; ಇದೊಂದು ಸಲ ಮನೆಯಲ್ಲೇ ಉಳಿ ಎಂದು."

"ಈ ಕನಸು, ಗಿನಸು, ಎಲ್ಲ ಬರೀ ಭ್ರಾಂತು ಅಮ್ಮ" ನಾನು ನಕ್ಕುಬಿಟ್ಟೆ. "ಅಲ್ಲದೆ, ಈಗ ನಾನು ವಹಿಸಿಕೊಂಡಿರುವ ಕಾರ್ಯ ಬಹಳ ಮುಖ್ಯವಾದುದು. "ಖಂಡಿತ ಮಾಡಿಕೊಂಡೆ ಬರುವೆ" ಎಂದು ನಾನು ಚಾರ್‌ಮೈಸ್ಟರ್‌ಗೆ ಮಾತುಕೊಟ್ಟಿದ್ದೇನೆ ಹತ್ತು ದಿನಗಳೊಳಗಾಗಿ ಹಿಂತಿರುಗುವೆ ನೋಡಿಕೊಂಡಿರು.''

ಆದರೂ ಅಮ್ಮ, ಒಂದೇ ಸಮನೆ ಅಳುತ್ತಲೇ ಇದ್ದಳು...:''

"ನಿನ್ನ ಮನಸ್ಸಿಗೇನಾದರೂ ಆತಂಕವಾಗಿದ್ದರೆ, ಹೋಗಬೇಡ ಗೆಸಿಯ. ಈ ಬಾರಿ ಬೇರೆಯವರನ್ನು ಕಳುಹಿಸಿದರಾಯಿತು. ನಿನ್ನಷ್ಟು ಚೆನ್ನಾಗಿ ಅವರಾರೂ ನಿರ್ವಹಿಸಲಾರರು; ಆದರೂ...." "ಬೇಡ ದೊರೆ, ನಾನೇ ಹೋಗುತ್ತೇನೆ. ನನಗೇನೂ ಭಯವಿಲ್ಲ. ನೀವು ಹೇಳಿದ್ದರಿಂದ ಹೇಳಬೇಕಾಯಿತು ಅಷ್ಟೇ.''

ದಿನಗಳು ಉರುಳಿದುವು-ವಾರಗಳು ಕಳೆದವು ; ಎಂದಿನಂತೆ ಆ ಅಂಧಕಾರಾವೃತವಾದ ರಾತ್ರಿಯಲ್ಲಿ ಮಾಯವಾದ ಗೆಸಿಯ ಹಿಂದಿನಂತೆ ಬರದಿರಲು, ಚಾರ್‌ಮೈಸ್ಟರ್‌ಗೆ ಯೋಚನೆಗಿಟ್ಟುಕೊಂಡಿತು. ತನಗೆ ಒಪ್ಪಿಸಿದ್ದ ಒಂದು ಮಹತ್ವ ಕಾರ್ಯವನ್ನು ಅದೇ ತಾನೆ ಯಶಸ್ವಿಯಾಗಿ ನಿರ್ವಹಿಸಿ ಬಂದಿದ್ದ ಫೆಲಿಕ್ಸ್‌ಗೂ ಕಳವಳವಾಯಿತು. ಹುಡುಕಿ ಬರಲು, ತಾನೇ ಖುದ್ದಾಗಿ ಹೊರಟನು.

ಆದರೆ, ಆ ವೇಳೆಗಾಗಲೇ ಗೆಸಿಯಾಳ ಕಥೆ ಮುಗಿದು, ಎಷ್ಟೋ ದಿನಗಳಾಗಿತ್ತು. ಹಿಂದೆ ಒಬ್ಬಾತ

ಗೆನಿಯಾಳನ್ನು ಮೋಹಿಸಿದ್ದ. ಆದರೆ, ಅವಳು ಅವನನ್ನು ಕಣ್ಣೆತ್ತಿ ಸಹ ನೋಡದಿರಲು, ರೋಷಗೊಂಡ ಅವನು ಎಂದಾದರೊಂದು ದಿನ ಸೇಡು ತೀರಿಸಿಕೊಳ್ಳುವೆನೆಂದು ಶಪಥಮಾಡಿದ್ದ—ಸೂಕ್ತ ಸಮಯಕ್ಕಾಗಿ ಹೊಂಚು ಹಾಕುತ್ತಿದ್ದ. ಮತ್ತೆ ಕಣ್ಣಿಗೆ ಬಿದ್ದ ತಕ್ಷಣ ಪೋಲೀಸರಿಗೆ ವರದಿ ಕೊಟ್ಟ. ಸರಿ, ಬಂದರು, ಬಂಧಿಸಿದರು-ನ್ಯಾಯಾಲಯದಲ್ಲಿ ನಿಲ್ಲಿಸಿ, ಗುರಿಪಡಿಸಿದರು.

ಅವಳ ಆ ದೈವೀಕ ಸೌಂದರ್ಯ, ತಾರುಣ್ಯದಿಂದ ಮುಗ್ಧರಾದ ನ್ಯಾಯಾಲಯದವರು, ಕಠಿಣಮನಸ್ಕರಾಗಿ ವರ್ತಿಸಲು, ಮೊದ ಮೊದಲು ಹಿಂತೆಗೆದರು. ಆದರೆ 'ಎಲ್ಲ ಗೂಢಾಚಾರರಿಗಿಂತ ಇವಳೇ ತುಂಬ ಅಪಾಯಕರ' ಎಂಬ ಆರೋಪ ಖಚಿತವಾದಾಗ ವರ್ತನೆ ಬದಲಾಯಿಸಿತು-ಮರಣದಂಡನೆ ವಿಧಿಸಲ್ಪಟ್ಟಿತು.

ಉದ್ವೇಗ ರಹಿತಳಾಗಿ ಗೆನಿಯ ತೀರ್ಪನ್ನು ಹೇಳಿಸಿಕೊಂಡಳು. ವಿಚಾರಣೆಯ ಸಮಯದಲ್ಲಿ ಸಹ, ತನ್ನ ಅಂತರೀಕ ಭಾವನೆಗಳನ್ನು ವ್ಯಕ್ತಪಡಿಸಲಿಲ್ಲ.

''ನಿನ್ನ ಈ ಮರಣದಂಡನೆಯನ್ನು ರದ್ದು ಮಾಡಿ, ಸೈಬೇರಿಯಾಕ್ಕೆ ಕಳುಹಿಸಲು ಸಾಧ್ಯ; ಹಾಗೆಂದು ಮೇಲಿನವರನ್ನು ಬೇಡಿಕೊಳ್ಳುತ್ತೀಯಾ ?'' ನ್ಯಾಯಾಧೀಶರು ಕರುಣೆಯಿಂದ ಕೇಳಿದಾಗ,

"ಏನು, ಜೀವಪರ್ಯಂತ ಸೈಬೇರಿಯಾಗೆ ಹೋಗಿ ಕೊಳೆಯುವುದೇ ? ಛೇ, ಅದರ ಒದಲು ಮರಣ ದಂಡನೆಯೇ ಮೇಲು,'' ಎಂದು ಉತ್ತರಿಸಿದಳು. ಕೊನೆಯವರೆಗೂ ಧೈರ್ಯವಾಗಿದ್ದು, ಶಾಂತ ಮನೋಭಾವದಿಂದ ಸಾವನ್ನು ಎದುರಿಸಿದಳು. ನೇಣು ಹಾಕುವವನ ಕಣ್ಣಲ್ಲಿ ಸಹ ನೀರು. ಬಂತು.

''ಇಂತು ಮುಗಿಯಿತು ನಮ್ಮ ಮುದ್ದು ಗೆನಿಯಳ ಕಥೆ" ಮೂರು ವಾರಗಳಾದ ಮೇಲೆ ಫೆಲಿಕ್ಸ್ ಎಳೆಯ ಮಗುವಿನಂತೆ ಬಿಕ್ಕಿ ಬಿಕ್ಕಿ ಅತ್ತನು. ಮುಗಿದೇ ಹೋಯಿತು.

ಆ ಮೂರು ವಾರಗಳೊಳಗೆ ಫೆಲಿಕ್ಸ್ ಗುರುತು ಇಡಿಯಲಾರದಷ್ಟು ಬದಲಾಯಿಸಿ ಬಿಟ್ಟಿದ್ದ! ತಲೆ ಕೂದಲು ಗಡ್ಡ, ಎಲ್ಲ ಅಂಕೆ ಇಲ್ಲದಂತೆ ಬೆಳೆದು, ಅವನಿಗೆ ಹುಚ್ಚನ ರೂಪ ಕೊಟ್ಟಿತ್ತು. ಕಣ್ಣುಗಳು ವಿಕಾರವಾಗಿದ್ದವು, ಕರಗಳು ಒಂದೇ ಸಮನೆ ನಡುಗುತ್ತಿದ್ದವು.

ಬರೀ ಸುದ್ದಿ ಸಂಗ್ರಹಿಸಿ ಬಂದಿರಲಿಲ್ಲ ಆತ. ಜೆನಿಯಳನ್ನು ಸಾವಿಗೆ ನೂಕಿದವನಾತನ ಮೇಲೆ ಸೇಡು ತೀರಿಸಿಯೇ ಮರಳಿದ್ದ ! ಉಪಾಯವಾಗಿ ಅವನನ್ನು ಕಾಡಿಗೆಳೆದು, ಅಲ್ಲಿ ಅವನನ್ನು ಜೀವಂತವಾಗಿ ಹೂಳಿದ್ದ ಅವನ ಆ ಕರುಣ ಚೀತ್ಕಾರವನ್ನು ಕೇಳಿದಾಗಲೇ ಇವನ ಹೃದಯಕ್ಕೆ ಸ್ವಲ್ಪ ಶಾಂತಿ ದೊರಕಿದ್ದು !.

''ನಮ್ಮ ಗೆನಿಯ ಹೊರಟು ಹೋದಳು......... ಮುದ್ದು ಗಿನಿಯ........ಎಲ್ಲರನ್ನೂ ಬಿಟ್ಟು ಹೊರಟೇ ಹೋದಳು' ಒಂದೇ ಸಮನೆ ಬಿಕ್ಕಳಿಸಿದ.

ಅವಳೊಂದಿಗೆ ಆವನ ಆ ಮನಮೋಹಕ ಉಲ್ಲಾಸವೂ ಭೂಗತವಾಗಿ ಹೋಗಿತ್ತು. ಪ್ರಣಯಿಯೊಂದಿಗೇ ಅವನ ಆ ನಗುವೂ ಮಾಯವಾಯಿತು. ●

---

## ಆ ಕಾ ಶ ಮ ಲ್ಲಿ ಗೆ

—ಕೆ. ವಿರೂಪಾಕ್ಷಗೌಡ

ಜೇಡ ಸಂತೆಯ ಸ್ಥಾನ ಬೆಲೆಯ ಭಲ ವ್ಯಾಪಾರ ಏಕೆ ಬೇಕು
ತಿಪ್ಪೆಯಲಿ ಚಪ್ಪರದಿ ಅಂಗಳದಿ ಬಿದ್ದು ನಗು ಓ ಗಿಡವೆ
ಹೂ ಮುಡಿದ ತುರುಬಿನೊಲು ನೀ ಬಾಳು
ಯಾರು ಹೊಗಳಿದರೇನು ? ಯಾರು ತೆಗಳಿದರೇನು ?
ಬಂದೀತು ನಿನಗೊಂದು ಒಳ್ಳೆ ಕಾಲ
ಈಗಿನ ಸತ್ಯ ನಾಳೆಯ ಮಿಥ್ಯ
ತೀರಿಸಲೇ ಬೇಕಿವರು ನೀ ಕೊಟ್ಟ ಸಾಲ
ಸರಳತೆ-ಸಮ-ಸಾಹಿತ್ಯ ಈ ಪದಗರ್ಭಕ್ಕೆ ನಿನ್ನ ಜೀವನವೆ ಮೂಲ ●

# ಜನಗಣತಿ

—ಡಿ. ವೆಂಕಟರಾವ್ ಎಂ.ಎ.

ಜನಗಣತಿ ಎಂದರೆ ಒಂದು ನಿರ್ದಿಷ್ಟ ಕಾಲದಲ್ಲಿ ದೇಶವೊಂದರ ಜನಸಂಖ್ಯೆಯನ್ನು ಅದಕ್ಕೆ ಸಂಬಂಧಿಸಿದ ಇತರ ಉಪಯುಕ್ತ ಮಾಹಿತಿಗಳನ್ನೂ ಸಂಗ್ರಹಿಸಿ, ಪ್ರಕಟಿಸುವ ಕ್ರಿಯೆ ಇದಕ್ಕೆ 'ಸೆನ್ಸಸ್' ಎಂತಲೂ ಕರೆಯುತ್ತಾರೆ.

ಜನಗಣತಿಯ ಪದ್ಧತಿ ಹೊಸದೇನೂ ಅಲ್ಲ. ಸುಮಾರು 5000 ವರ್ಷಗಳಷ್ಟು ಹಿಂದೆಯೇ ಈ ಪದ್ಧತಿ ರೂಢಿಯಲ್ಲಿತ್ತು ಎಂದು ತಿಳಿದು ಬಂದಿದೆ. ಹಿಂದೆ ಬ್ಯಾಬಿಲಾನ್‌ನಲ್ಲಿ ಜನಸಂಖ್ಯೆ ಹಾಗೂ ಕೆಲಸಗಾರರ ಅಂಕಿ-ಅಂಶಗಳನ್ನು ಸಂಗ್ರಹಿಸಲು ಒಂದು ಬಗೆಯ ಖಾನೇಸುಮಾರಿ (ಸೆನ್ಸಸ್)ಯನ್ನು ನಡೆಸಲಾಗುತ್ತಿತ್ತು. ಪ್ರಾಚೀನ ಗ್ರೀಸ್, ರೋಂ, ಪರ್ಷಿಯ, ಇಸ್ರೇಲ್, ಭಾರತ, ಚೀನಾ ದೇಶಗಳಲ್ಲೂ ಈ ಪದ್ಧತಿ ಅಸ್ತಿತ್ವದಲ್ಲಿತ್ತು ಎಂಬುದು ಸಾಕಷ್ಟು ಆಧಾರಗಳಿಂದ ದೃಢವಾಗಿದೆ. ಭಾರತದಲ್ಲಿ ಜನಗಣತಿಯು ರೂಢಿಯಲ್ಲಿದ್ದುದು ಕೌಟಿಲ್ಯನ ಅರ್ಥಶಾಸ್ತ್ರದಿಂದ ಬೆಳಕಿಗೆ ಬಂದಿದೆ. ಜನ ಮತ್ತು ಜಾನುವಾರುಗಳ ಲೆಕ್ಕವನ್ನು, ಕೃಷಿ ಹಾಗೂ ಜನರ ಆರ್ಥಿಕ ಸ್ಥಿತಿಗೆ ಸಂಬಂಧಿಸಿದ ಲೆಕ್ಕವನ್ನು ಹಳ್ಳಿಗಳಲ್ಲಿ ಹಾಗೂ ಪಟ್ಟಣಗಳಲ್ಲಿ ತೆಗೆದುಕೊಳ್ಳಲಾಗುತ್ತಿತ್ತು ಎಂದು ಕೌಟಿಲ್ಯನ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ. ಹಿಂದಿನ ಕಾಲದ ಜನಗಣತಿಯ ಮುಖ್ಯ ಉದ್ದೇಶಗಳೆಂದರೆ, ಒಬ್ಬ ರಾಜನ ಆಡಳಿತಕ್ಕೆ ಒಳಪಟ್ಟ ದೇಶದಲ್ಲಿ ವಾಸಿಸುವ ಜನರ ಸಂಖ್ಯೆಯ ಪ್ರಮಾಣ, ಅವರ ಪೈಕಿ ತೆರಿಗೆ ವಿಧಿಸಬಹುದಾದಂತಹ ಜನರು ಎಷ್ಟಿದ್ದಾರೆ, ಸೈನ್ಯಕ್ಕೆ ಸೇರಿಸಿಕೊಳ್ಳಬಹುದಾದ ದೃಢಕಾಯ ತರುಣರು ಎಷ್ಟಿದ್ದಾರೆ ಇವೇ ಮುಂತಾದ ವಿವರಗಳನ್ನು ತಿಳಿಯುವುದು.

1666 ರಲ್ಲಿ ಕೆನಡಾದ ಕ್ವೆಬೆಕ್ ಎಂಬ ಪ್ರಾಂತದಲ್ಲಿ ಆಧುನಿಕ ರೀತಿಯ ಮೊಟ್ಟಮೊದಲಿನ ಜನಗಣತಿಯನ್ನು ನಡೆಸಲಾಯಿತು. 1749 ರಲ್ಲಿ ಸ್ವೀಡನ್‌ನಲ್ಲಿ ಜನಗಣತಿ ನಡೆಯಿತು. 1790ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿಯೂ 1801ರಲ್ಲಿ ಇಂಗ್ಲೆಂಡಿನಲ್ಲೂ ಜನಗಣತಿಯ ಪದ್ಧತಿ ಜಾರಿಗೆ ಬಂದಿತು. ಭಾರತದಲ್ಲಿ ಅಕ್ಬರನ ಕಾಲದಲ್ಲಿ ಜನಗಣತಿಯು ಕ್ರಮಬದ್ಧವಾಗಿ ನಡೆಯುತ್ತಿತ್ತು ಎಂಬುದಕ್ಕೆ ಅಕ್ಬರನ ಮಂತ್ರಿಯಾದ ಅಬುಲ್ ಫಸಲ್ ಬರೆದಿರುವ ಗ್ರಂಥವೇ ಸಾಕ್ಷಿ.

ಇಡೀ ವಿಶ್ವದಲ್ಲಿ ವ್ಯವಸ್ಥಿತ ರೀತಿಯಲ್ಲಿ ವ್ಯಾಪಿತವಾಗಿ ಜನಗಣತಿ ನಡೆಸುವ ಅತ್ಯಂತ ದೊಡ್ಡ ದೇಶ ಭಾರತ ಎಂದು ತಿಳಿದುಬಂದಿದೆ. 1872ರಲ್ಲಿ ಮೊದಲನೆ ಕ್ರಮಬದ್ಧ ಜನಗಣತಿ ಭಾರತದಲ್ಲಿ ಅನುಷ್ಠಾನಕ್ಕೆ ಬಂದಿತು. ದೇಶದ ಕೆಲವು ಭಾಗಗಳಲ್ಲಿ ಮಾತ್ರ ಜಾರಿಗೆ ಬಂದ ಇದರಲ್ಲಿ ಬಹಳ ಕುಂದುಕೊರತೆಗಳು ತುಂಬಿದ್ದುವು. ನಂತರ 1881ರಲ್ಲಿ ನಡೆಸಿದ ಜನಗಣತಿಯು ಶಾಸ್ತ್ರೀಯವಾಗಿತ್ತು. ಅಷ್ಟೇ ಅಲ್ಲ ಅಖಿಲ ಭಾರತ ವ್ಯಾಪ್ತಿಯನ್ನು ಪಡೆದಿತ್ತು. ಅಲ್ಲಿಂದೀಚೆಗೆ ಭಾರತದಲ್ಲಿ ಪ್ರತಿ 10 ವರ್ಷಗಳಿಗೊಮ್ಮೆ ಜನಗಣತಿಯನ್ನು ನಡೆಸಲಾಗುತ್ತಿದೆ. ಈ ಪರಂಪರೆಯಲ್ಲಿ 1971 ರಲ್ಲಿ ನಡೆದ ಜನಗಣತಿಯು 11ನೆಯದಾಗಿದೆ. 1981 ರ ಹನ್ನೆರಡನೆಯ ಜನಗಣತಿಗೆ ಈಗಾಗಲೆ ಎಲ್ಲಾ ಸಿದ್ಧತೆಗಳನ್ನು ಮಾಡಲಾಗಿದೆ. 1941 ನೇ ಇಸವಿಗೆ ಮೊದಲು ದೇಶಾದ್ಯಂತ ಜನರ ಎಣಿಕೆಯನ್ನು ಒಂದು ಸಮಯದಲ್ಲಿ ಮಾಡಲಾಗುತ್ತಿತ್ತು. ಅಂದರೆ ಜನಗಣತಿಯು ಆಗ ಏಕಕಾಲಿಕವಾಗಿತ್ತು. 1941ರಲ್ಲಿ ಭಿನ್ನ ಕಾಲಿಕ ಜನಗಣತಿ ಕಾರ್ಯರೂಪಕ್ಕೆ ಬಂದಿತು. ಜನರು ವಾಸಿಸುವ ಸ್ಥಳಗಳಲ್ಲಿ ಅವರ ಎಣಿಕೆಯನ್ನು ಮಾಡುವ ಪದ್ಧತಿ ಅಲ್ಲಿಂದ ಜಾರಿಗೆ ಬಂದಿತು.

ಭಾರತದಲ್ಲಿ ಕೇಂದ್ರ ಸರಕಾರವು ಜನಗಣತಿಯನ್ನು ನಡೆಸುವ ಆರ್ಥಿಕ ಹಾಗೂ ಇತರ ಜವಾಬ್ದಾರಿಗಳನ್ನು ಹೊತ್ತಿದೆ. ದೇಶಾದ್ಯಂತ ಜನನ, ಮರಣ ಮತ್ತು ಜನಸಂಖ್ಯಾ ಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ನಿರ್ವಹಿಸಲು ಭಾರತ ಸರಕಾರ ಒಂದು ಇಲಾಖೆಯನ್ನು ಸ್ಥಾಪಿಸಿದೆ. ಇದರ ಪ್ರಧಾನಾಧಿಕಾರಿಗೆ ರಿಜಿಸ್ಟ್ರಾರ್–ಜನರಲ್ ಎಂದು ಕರೆಯುತ್ತಾರೆ. ಈತ ಭಾರತದ ಜನಗಣತಿಯ ಕಮಿಷನರ್. ಇವರಲ್ಲದೆ ಪ್ರತಿಯೊಂದು ರಾಜ್ಯಕ್ಕೂ ಒಬ್ಬ ಸೂಪರಿಂಟೆಂಡೆಂಟ್ ಇರುತ್ತಾನೆ. ಈತನ ಕೆಳಗೆ ಇತರ ಅಧೀನ ಅಧಿಕಾರಿಗಳು ಇರುತ್ತಾರೆ. ಇವರೆಲ್ಲರೂ ಕೆಲಸ ಮಾಡಿ ಜನಗಣತಿಯ ಕಾರ್ಯ ನಿರ್ವಹಿಸುತ್ತಾರೆ. ಜನಗಣತಿ ನಡೆಯಬೇಕೆಂದಿರುವ ದಿನಕ್ಕೆ

ಎರಡು ವರ್ಷಗಳ ಮೊದಲೇ ಅದಕ್ಕೆ ಅವಶ್ಯವಾದ ವ್ಯವಸ್ಥೆಗಳನ್ನು ಪ್ರಾರಂಭಿಸಲಾಗುತ್ತದೆ. ಪ್ರತಿಯೊಂದು ಹಳ್ಳಿ, ನಗರದಲ್ಲಿ ಇರುವ ಮನೆಗಳನ್ನು ಹಾಗು ಇತರ ಕಟ್ಟಡಗಳನ್ನು ಎಣಿಕೆಮಾಡಿ ಅವಕ್ಕೆ ಕ್ರಮಸಂಖ್ಯೆ ಕೊಡಲಾಗುತ್ತದೆ. 1971ರ ಜನಗಣತಿಯಲ್ಲಿ 650 ರಿಂದ 750 ಜನರ ಅಂದರೆ ಸುಮಾರು 120–150 ಮನೆಗಳ ಎಣಿಕೆಗೆ ಒಬ್ಬರಂತೆ 10 ಲಕ್ಷ ಎಣಿಕೆದಾರರನ್ನು ನೇಮಿಸಲಾಗಿತ್ತು. 20 ದಿನಗಳಲ್ಲಿ ಇವರು ಜನಗಣತಿಯ ನಮೂನೆಯಲ್ಲಿ ಕೇಳಲಾಗಿದ್ದ ಎಲ್ಲಾ ವಿವರಗಳನ್ನೂ ಪಡೆದುಕೊಂಡರು. ಮನೆಗಳಿಲ್ಲದವರ ಎಣಿಕೆಯನ್ನು ಅವರು ಮಲಗುವ ಛತ್ರ, ಫುಟ್‌ಪಾತ್‌ಗಳಲ್ಲಿ ಮಾಡಲಾಯಿತು.

**ಜನಗಣತಿಯ ಆವಶ್ಯಕತೆ:**

ಒಂದು ದೇಶದ ಅರ್ಥವ್ಯವಸ್ಥೆಯಲ್ಲಿ ಜನಗಣತಿಯು ಹಿರಿಯ ಸ್ಥಾನ ಹೊಂದಿದೆ. ಆರೋಗ್ಯ, ಸಾಕ್ಷರತೆ, ವರಮಾನ, ಜೀವನಮಟ್ಟ, ಶಿಕ್ಷಣ, ಆಹಾರ ಮತ್ತು ಇತರ ವಸ್ತುಗಳ ಪೂರೈಕೆ, ಕೃಷಿ ಹಾಗು ಕೈಗಾರಿಕೆಗಳ ಉತ್ಪತ್ತಿ ಮುಂತಾದವುಗಳ ಬಗ್ಗೆ ಜನಗಣತಿಯು ಮಾಹಿತಿ ನೀಡುವುದರಿಂದ ಅವುಗಳ ಅಭಿವೃದ್ಧಿಕಾರ್ಯ ಸುಲಭವಾಗುತ್ತದೆ. ಇದಲ್ಲದೆ ದೇಶದಿಂದ ಅನುಕೂಲ ಪಡೆಯಲು ಹಕ್ಕುಳ್ಳ ಪ್ರದೇಶಗಳು ಅಥವಾ ಗುಂಪುಗಳನ್ನು ನಿರ್ಧರಿಸಲು, ವಿಧಾನಸಭೆಗಳಿಗೆ ಅರ್ಹರಾದವರ ಸಂಖ್ಯೆಯನ್ನು ನಿರ್ಧರಿಸಲು ಜನಗಣತಿ ಆವಶ್ಯಕ. ಕಾರ್ಮಿಕ ಬಲ, ನಗರಕ್ಕೆ ವಲಸೆಬಂದ ಜನ, ಗ್ರಾಮೀಣ ಹಾಗೂ ನಗರೀಯ ಜನ, ನಿರಾಶ್ರಿತರು, ಆರ್ಥಿಕವಾಗಿ ಅವಲಂಬಿಗಳಾಗಿರುವವರು, ತಾಂತ್ರಿಕ ಕೆಲಸಗಾರರು ಮುಂತಾದವರನ್ನು ಗುರುತಿಸಲು ಜನಗಣತಿ ಸಹಕಾರಿಯಾಗಿದೆ. ಸಾಮಾಜಿಕ ಹಾಗು ಆರ್ಥಿಕ ಸಂಶೋಧನೆಗಳನ್ನು ನಡೆಸಲೂ ಜನಗಣತಿ ಮುಖ್ಯ ಸಾಧನವಾಗಿದೆ. ದೇಶದ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಯ ಬಗ್ಗೆ ಜನಗಣತಿಯು ಆಸ್ಥೆಯನ್ನು ಹೊಂದಿದೆ. ಈ ಕಾರಣಗಳಿಂದಾಗಿ ಜನಗಣತಿಯು ಅತಿಮಹತ್ವವುಳ್ಳದ್ದಾಗಿದೆ.

ತ್ರವಾರ್ತೆ :

# ೧ ಸಿದ್ಧಗಂಗೆಯಲ್ಲಿ ಬನ್ನಿಹಬ್ಬ

— ಕೆ. ಬಸವರಾಜು

ಶಮೀಶಮತೇ ಪಾಪಂ ಶಮೀಶತ್ರು ವಿನಾಶಿನೀ ।
ಅರ್ಜುನಸ್ಯ ಧನುರ್ಧಾರೀ ರಾಮಸ್ಯ ಪ್ರಿಯದರ್ಶಿನೀ ॥

ಈ ಮಂತ್ರ ಪೂರ್ವಕವಾಗಿ ಶಮೀ ಅಥವಾ ಬನ್ನಿ ಪೂಜೆ ನಡೆಯುತ್ತದೆ. ನಮ್ಮ ದೇಶದಲ್ಲಿ ಈ ಶಮೀ ಪೂಜೆ ಪ್ರಾಚೀನತಮವಾದುದು. ರಘು ಮಹಾರಾಜನು ಶಮೀ ವೃಕ್ಷವನ್ನು ಪೂಜಿಸಿ ಫಲ ಪಡೆದನಂತೆ. ಪಾಂಡವರು ವಿರಾಟನಗರದಲ್ಲಿ ಅಜ್ಞಾತವಾಸವನ್ನು ಪ್ರಾರಂಭಿಸಿದಾಗ ತಮ್ಮ ಶಸ್ತ್ರಾಸ್ತ್ರಗಳನ್ನು ಬನ್ನಿ ಮರದಲ್ಲಿಟ್ಟು ಪೊರೆಯುವಂತೆ ಮೊರೆಯಿಟ್ಟರು. ಅದರ ಅನುಸಂಬಂಧವಾದ ವಿಜಯ ದಶಮಿಯ ಆಚರಣೆಯೂ ಅಷ್ಟೇ ಸಾಂಕೇತಿಕವಾಗಿದೆ. ಪಾಂಡವರ ಅಜ್ಞಾತವಾಸ ಪ್ರಾರಂಭವಾದುದು ದಶಮಿಯ ದಿನದಂದು. ಮುಕ್ತಾಯವಾದದ್ದೂ ವಿಜಯ ದಶಮಿಯಂದೆ. ಚಾಮುಂಡಿ ದೇವಿ ಮಹಿಷಾಸುರಾದಿ ಅಸುರರ ವಿರುದ್ಧ ಒಂಭತ್ತು ದಿವಸಗಳ ಕಾಲ ಹೋರಾಡಿ ದಶಮಿಯಂದು ವಿಜಯವನ್ನು ಸಂಪಾದಿಸುತ್ತಾಳೆ. ಹೀಗೆ ಆಸುರೀ ಶಕ್ತಿಯ ವಿರುದ್ಧ ದೈವೀ ಶಕ್ತಿಯ ವಿಜಯದ ಸಂಕೇತವೇ ವಿಜಯ ದಶಮಿಯ ಆಚರಣೆ. ಇಂತಹ ವಿಜಯ ದಶಮಿ ಅಥವಾ ದಸರಾ ಹಬ್ಬ ಪ್ರಮುಖವಾದ ನಾಡಹಬ್ಬವಾಗಿದೆ. ಹತ್ತು ದಿವಸಗಳ ಪರ್ಯಂತ ಆಚರಿಸುವ ಈ ಹಬ್ಬದಲ್ಲಿ ಸಪ್ತಮಿಯಂದು ಸರಸ್ವತೀ ಪೂಜೆ, ಅಷ್ಟಮಿಯಂದು ದುರ್ಗಾ ಪೂಜೆ, ನವಮಿಯಂದು ಆಯುಧ ಪೂಜೆ, ದಶಮಿಯಂದು ಶಮೀಪೂಜೆ– ಇವು ಮುಂತಾದುವು ಮುಖ್ಯವಾದವು.

ಈ ಒಂದು ಪರಂಪರೆಯನ್ನು ಶ್ರೀಮಠದಲ್ಲಿಯೂ ವರ್ಷಂಪ್ರತಿ ನಡೆಸಿಕೊಂಡು ಬರಲಾಗುತ್ತಿದೆ. ಅದರಂತೆ ಈ ವರ್ಷವೂ ಕೂಡ ಹತ್ತು ದಿವಸಗಳ ಪರ್ಯಂತ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ಮಹಾನ್ಯಾಸ ಪೂರ್ವಕ ಪೂಜಾ ಸೇವೆಯೂ, ಸರಸ್ವತೀ ಪೂಜೆ, ದುರ್ಗಾಪೂಜೆ, ಆಯುಧ ಪೂಜೆ ನಡೆದು 19-10-80 ರಂದು ಭಾನುವಾರ ವಿಜಯ ದಶಮಿಯನ್ನು ವೈಭವದಿಂದ ಆಚರಿಸಲಾಯಿತು. ಅಂದು ಸಂಜೆ 6 ಘಂಟೆಯಿಂದ ಉತ್ಸವದ ಸಡಗರ ಆರಂಭವಾಯಿತು. ಶ್ರೀ ಮಠದ ಮುಂಭಾಗದಿಂದ ಶ್ರೀ ಶ್ರೀಗಳವರನ್ನು ಹೊತ್ತ ಮೇನೆ ಗಿರಿಯ ಮೇಲಕ್ಕೆ ಮಂದಯಾನ ಮಾಡಿತು. ಶ್ರೀ ಮಠದ ವಿದ್ಯಾರ್ಥಿ ವೃಂದ ಮತ್ತು ಭಕ್ತ ವರ್ಗ ಹೆಗಲಿಗೆ ಹೆಗಲು ಕೊಟ್ಟು ಹೊತ್ತ ಉತ್ಸವವು ವಾದ್ಯ ಘೋಷ ಛತ್ರಿ ಚಾಮರಗಳ ಪುರಸ್ಸರವಾಗಿ ಮುನ್ನಡೆಯಿತು. ಈ ಒಂದು ದೃಶ್ಯ ಸ್ವರ್ಗೀಯವಾಗಿತ್ತು, ಭವ್ಯವಾಗಿತ್ತು. ಅದನ್ನು ಕಂಡ ಭಕ್ತಭಾವುಕರ ಹೃದಯದಲ್ಲಿ ಭಕ್ತಿ ರಸ ತುಂಬಿ ತುಳುಕಿತು. ಕಣ್ಣಂಚಿನಲ್ಲಿ ಆನಂದದ ಹನಿ ಚಿಮ್ಮಿತು. ನಾಲಗೆಯಲ್ಲಿ ಜಯಕಾರ ಮೊಳಗಿತು.

ನಂತರ ಗಿರಿಯ ಮೇಲಿಂದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮೂರ್ತಿಯನ್ನು ಸಕಲ ಮರ್ಯಾದೆಯೊಂದಿಗೆ ಮಹಾನವಮಿ ಮಂಟಪಕ್ಕೆ ಕರೆ ತರಲಾಯಿತು. ಪೂಜ್ಯ ಪಾದರ ದಿವ್ಯ ನೇತೃತ್ವದಲ್ಲಿ ಕಾರ್ಯಕ್ರಮ ಪ್ರಾರಂಭವಾಯಿತು. ಮೊದಲು ಕುಸ್ತಿ, ದೊಣ್ಣೆವರಸೆ, ಪಂಜಿನ ವರಸೆ, ಮುಂತಾದ ಅಂಗ ವ್ಯಾಯಾಮ ಪ್ರದರ್ಶನ ನಡೆಯಿತು. ಆಮೇಲೆ ಪೂಜ್ಯ ಪಾದರ ಅನುಗ್ರಹ ಭಾಷಣ ಮಾಡಿದರು. ಪುರೋಹಿತರಿಂದ ಕೊನೆಯಲ್ಲಿ ರಾಜೋಪಚಾರಾದಿ ಪೂಜಾ ಸೇವಾ ಕೈಂಕರ್ಯ ಸ್ವಾಮಿಗೆ ನಡೆದು ಮಹಾ ಮಂಗಳದೊಡನೆ ಸಭೆಯು ಮುಕ್ತಾಯವಾಯಿತು. ಈ ದಸರಾ ಉತ್ಸವಕ್ಕೆ ಸಾವಿರಾರು ಮಂದಿ ಭಕ್ತರು ನೆರೆದಿದ್ದರು.

## ೨ ಶ್ರೀ ಕ್ಷೇತ್ರದಲ್ಲಿ ವಿರಕ್ತಾಶ್ರಮಾನ ಗ್ರಹ ಮಹೋತ್ಸವ

ವಟುವೊಬ್ಬರಿಗೆ ನಡೆದ ವಿರಕ್ತಾಶ್ರಮಾನುಗ್ರಹ ಮಹೋತ್ಸವವು ಈ ವರ್ಷದ ವಿಜಯದಶಮಿಯ ವಿಶೇಷವಾಗಿತ್ತು. ವಟುವಿನ ಪೂರ್ವಾಶ್ರಮದ ಹೆಸರು ಶ್ರೀ

ಮರಿಬಸವಯ್ಯ ಎಂದು. ಬಿ. ಎ. ಪದವೀಧರರು. ಪರಮ ಪೂಜ್ಯ ಶ್ರೀ ಶ್ರೀ ( ) ಗಳವರ ದಿವ್ಯ ಪುರೋದೃಷ್ಟಿಯಿಂದ ಆಯ್ಕೆಗೊಂಡವರು. ವಿರಕ್ತಾಶ್ರಮಾನುಗ್ರಹ ಪ್ರದಾನ ಮಾಡಿದವರು, ಕನಕಪುರದ ದೇಗುಲಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಸ್ವ. ಚರಮೂರ್ತಿ ಶ್ರೀ ಮಹಾಲಿಂಗಸ್ವಾಮಿಗಳು ಮುಹೂರ್ತ : 1902 ರ ರೌದ್ರಿನಾಮ ಸಂವತ್ಸರದ ಆಶ್ವೀಜ ಶುದ್ಧ ಭಾನುವಾರ ಬೆಳಗ್ಗೆ ಬ್ರಾಹ್ಮೀ ಮುಹೂರ್ತ. ಅಧಿಕಾರ ವಹಿಸಿಕೊಂಡ ಮಠ, ಮಂಡ್ಯ ಜಿಲ್ಲೆಯ ಬೇಬಿ ಬೆಟ್ಟದ ಮಠ. ಆ ಮಠದ ಅಧಿಕಾರವನ್ನು ಅನುಗ್ರಹಿಸಿದವರು, ಶ್ರೀ ಮರಿದೇವರುಸ್ವಾಮಿಗಳು.

ಈ ಉತ್ಸವದ ಅಂಗವಾಗಿ ಅಂದು ಬೆಳಗ್ಗೆ ಶಿವಾನುಭವ ಸಭೆಯನ್ನು ಏರ್ಪಡಿಸಲಾಗಿತ್ತು. ಅನೇಕ ಮಠಾಧ್ಯಕ್ಷರೂ, ಹರಗುರು ಚರಮೂರ್ತಿಗಳೂ ಮತ್ತು ಭಕ್ತರು ಸಭೆಯಲ್ಲಿ ಭಾಗವಹಿಸಿದ್ದರು. ಪ್ರಾರ್ಥನಾ, ಸ್ವಾಗತಾದಿ ಕಾರ್ಯಕ್ರಮದ ಸಮಯಾನಂತರ ಹಲವಾರು ಮಂದಿ ಹರಗುರು ಚರಮೂರ್ತಿಗಳು ಶಿವಾನುಭವದ ಬಗ್ಗೆ ನುಡಿದರು. ಪ್ರಥಮತಃ ದೇಗುಲ ಮಠಾಧ್ಯಕ್ಷರಾದ ಚರಮೂರ್ತಿ ಶ್ರೀ ಶ್ರೀ ಮಹಾಲಿಂಗ ಸ್ವಾಮಿಗಳವರು-ಸ್ವಾಮಿಗಳಾದವರು ಹೇಗೆ ನೈಷ್ಠಿಕವಾದ ಆಚಾರ ವಿಚಾರಗಳಿಂದ ಸಮಾಜ ಸೇವೆಗೆ ಬದ್ಧರಾಗಬೇಕೆಂಬುದನ್ನು ದೃಷ್ಟಾಂತ ಕತೆಗಳಮೂಲಕ ತಿಳಿಯಾದ ಭಾಷೆಯಲ್ಲಿ ಭಕ್ತರ ಮನಂಪುಗುವಂತೆ ನುಡಿದರು. ಮತ್ತು ಸ್ವಾಮಿಗಳ ಸೇವಾಕಾರ್ಯದಲ್ಲಿ ಭಕ್ತರು ಸದಾ ಸಹಕಾರ ಹಸ್ತವನ್ನು ನೀಡಬೇಕೆಂದೂ ತಿಳಿಸಿದರು. ನಂತರ ಅಂಕನಹಳ್ಳಿ ಮಠಾಧ್ಯಕ್ಷರು, ನವೀನ ಸಮಾಜಕ್ಕೆ ಸ್ವಾಮಿಗಳಾದವರು ಹೇಗೆ ಹೊಂದಿಕೊಂಡು ಹೋಗ-ಬೇಕೆಂಬುದನ್ನು ; ಜೆಟ್ಟಹಳ್ಳಿ ಮಠಾಧ್ಯಕ್ಷರು, ಗುರುವಿನ ಮಹತ್ವವನ್ನು ; ಹೊನ್ನಮ್ಮನ ಗವಿ ಮಠದ ಶ್ರೀಗಳವರು ಗುರು-ಶಿಷ್ಯರ ಸಂಬಂಧವನ್ನೂ ; ನೆಲಮಂಗಲದ ಬಸವಣ್ಣದೇವರ ಮಠಾಧ್ಯಕ್ಷರು ನಿರಂತರ ಸದಾಶಿವನ ನಾಮಸ್ಮರಣೆಯ ಮಹಿಮೆಯನ್ನೂ ; ಮತ್ತು ಕಂಚಗಲ್ ಬಂಡೇ ಮಠದ ಶ್ರೀಗಳು ಸ್ವಾಮಿಗಳಾದವರ ಕರ್ತವ್ಯ-ವೇನೆಂಬುದನ್ನೂ ಅನುಕ್ರಮವಾಗಿ ತಿಳಿಸಿದರು. ನಂತರ ನೂತನವಾಗಿ ಆಶ್ರಮವನ್ನು ಸ್ವೀಕರಿಸಿದ ಶ್ರೀ ಸದಾಶಿವ ಸ್ವಾಮಿಗಳವರು ಭಾಷಣಮಾಡಿ, ಯಥಾಶಕ್ತಿ ಮತ್ತು ಯಥಾಮತಿ ಆಶ್ರಮದ ಕಟ್ಟು ಕಟ್ಟಲೆಗಳನ್ನು ಪರಿಪಾಲಿಸುತ್ತ ಸಮಾಜ ಸೇವೆಯನ್ನು ಮಾಡುತ್ತೇನೆಂಬುದಾಗಿ ಸಭೆಯ ಎದುರು ಪ್ರತಿಜ್ಞೆಯನ್ನು ಕೈಗೊಂಡರು. ಕೊನೆಯದಾಗಿ ಶ್ರೀ ಶ್ರೀ ಶ್ರೀ ಗಳವರ ಆಶೀರ್ವಚನ ಮತ್ತು ಮಂಗಳದೊಡನೆ ಕಾರ್ಯಕ್ರಮವು ಮುಕ್ತಾಯವಾಯಿತು. ನಂತರ ಬಂದ ಭಕ್ತರಿಗೆಲ್ಲ ಪ್ರಸಾದ ನೀಡಿಕೆ ನಡೆಯಿತು.

